# ನಮ್ಮ ಮಾನಸ

ಏಪ್ರಿಲ್ 2012
ಸಂಪುಟ : 5 ಸಂಚಿಕೆ : 12

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 98804 67372 / 98869 18910*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಲೇಖಾ ಅಡವಿ, ದಿಶಾ ಕೆ.ಆರ್., ಜಾನ್ಹವಿ ಎ., ನಿಹಾರಿಕ ಶೆಣ್ಯೆ, ಸಮುದ್ಯತಾ ಕಂಜರ್ಪಣೆ, ಶೀತಲ ಭಟ್**

*ಸಲಹೆ – ಸಹಕಾರ, ಮಾನಸ ಬಳಗ*
**ಸವಿತಾ ಎ., ಚಂಪಾವತಿ ಹೆಚ್.ಎಸ್., ನೀಲಾಂಜನ, ಸರಸ್ವತಿ ದು., ಗೀತಾ, ಶಾರದ ಬಿ.ಎನ್. ತಸ್ನೀಂತಾಜ್, ಸುಪ್ರಿಯ**

*ಚಂದಾ ವಿವರ*

| | |
|---|---|
| ಬಿಡಿಪ್ರತಿ | 10–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

**ಪ್ರಾರಂಭ : 'ಮಾನವಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**

## ಒಳಗಿನ ಪುಟಗಳಲ್ಲಿ....





## ಸಹೃದಯ ಓದುಗರಲ್ಲಿ...

ನೀವು ನಮ್ಮ ಚಿಂತನೆ–ಗುರಿಯನ್ನು ಬಲಪಡಿಸುವಿರೆಂದು ನಮಗೆ ನಂಬಿಕೆ ಇದೆ. ನೀವು ಓದುತ್ತಿರುವ ಮಾನಸವನ್ನು ಹೊರತರಲು ನಿಮ್ಮ ಆರ್ಥಿಕ ನೆರವು, ಪ್ರೋತ್ಸಾಹ ಮುಖ್ಯ. ಮಾನಸವನ್ನು ಮತ್ತೊಮ್ಮೆ ನಿರಂತರವಾಗಿ ಜೀವಂತವಾಗಿಡಲು ಸಹೃದಯ ಓದುಗರ ಬೆಂಬಲದ ಅಗತ್ಯವಿದೆ. ನೀವು ಯಾವುದಾದರೊಂದು ಬಗೆಯಲ್ಲಿ ನಮ್ಮೊಂದಿಗೆ ಕೈಜೋಡಿಸಬಹುದು.

- ಪ್ರತಿ ತಿಂಗಳಿಗೊಮ್ಮೆ ಲೇಖನಗಳನ್ನು ಬರೆಯಿರಿ ಇಲ್ಲವೇ ಬೇರೆಯವರಿಂದ ಬರೆಯಿಸಿ, ಕಳುಹಿಸಿ.
- ವಾರ್ಷಿಕ ಚಂದಾದಾರರಾಗಿ ಮತ್ತು ಇನ್ನಷ್ಟು ಚಂದಾದಾರರನ್ನು ಪರಿಚಯಿಸಿ.
- ಮಾನಸದ ಒಂದು ತಿಂಗಳ ಮುದ್ರಣದ ಖರ್ಚು ರೂ. 7,000/- ರಲ್ಲಿ ಪೂರ್ತಿ ಇಲ್ಲವೇ ನಿಮಗೆ ಸಾಧ್ಯವಾದಷ್ಟು ಹಣವನ್ನು ಕೊಟ್ಟು ಬೆಂಬಲಿಸಿ.

ಕೈ ಜೋಡಿಸುವಿರೆಂಬ ಆಶಯದೊಂದಿಗೆ,

**ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ**

E-mail: nammamanasa@gmail.com
Contact: Disha K.R.: 9880467372, Lekha: 9686757053, Samudyatha : 97388 22836



ಸಂಪಾದಕೀಯ

# ಮುಂಗಡ ಪತ್ರ ಲಿಂಗ ಸೂಕ್ಷ್ಮತೆ ಹೊಂದಿದೆಯೇ?

ಕೇಂದ್ರ ಹಾಗೂ ಕರ್ನಾಟಕ ಸರ್ಕಾರದ ಬಜೆಟ್ ಈಗ ಮಂಡನೆಯಾದ ಹಿನ್ನೆಲೆಯಲ್ಲಿ ಸರ್ಕಾರ ಹಾಗೂ ಪ್ರಭುತ್ವಗಳ ಲಿಂಗಾಧಾರಿತ ಸಮಾನತೆಗಳ ಬಗ್ಗೆಗಿನ ಬದ್ಧತೆ ಬಜೆಟ್‌ನಲ್ಲಿ ಸಾಕಾರಗೊಂಡಿದೆಯೇ ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಬೇಕಾಗುತ್ತದೆ. 101ನೆಯ ಅಂತರರಾಷ್ಟ್ರೀಯ ಮಹಿಳಾ ವರ್ಷದ ಇತಿಹಾಸದಲ್ಲಿ ನಿಂತಿರುವ ನಾವು, ಇಷ್ಟು ದೀರ್ಘ ಮಹಿಳಾ ಹೋರಾಟದ ಹಿನ್ನಲೆ ಸರ್ಕಾರ, ಪ್ರಭುತ್ವಗಳ ಮಹಿಳೆಯರ ಬಗ್ಗೆಗಿನ ತಾತ್ವಿಕ ನಿಲುವುಗಳನ್ನು ಬದಲಾಯಿಸಿವೆಯೇ ಎಂಬುದನ್ನು ಯೋಚಿಸಬೇಕಾಗುತ್ತದೆ. ಅವು ಸರ್ಕಾರದ ಯೋಜನೆಗಳಲ್ಲಿ ರೂಪಿತಗೊಂಡಿವೆಯೇ? ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಮಹಿಳೆಯರಿಗೆ ತಲುಪುತ್ತಿವೆಯೇ? ಬಜೆಟ್‌ನಲ್ಲಿ ಮಹಿಳೆಯರು ಕೇಂದ್ರ ಬಿಂದುವಾಗಿದ್ದಾರೆಯೇ? ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳುವ ಜರೂರಿ ಅಗತ್ಯವಿದೆ. ಬಜೆಟ್ ಆಯಾ ಸರ್ಕಾರದ ಅಭಿವೃದ್ಧಿ ಪಥದ ವಿಷನ್ ಹಾಗೂ ಕಾಳಜಿಯನ್ನು ಪ್ರತಿನಿಧಿಸುತ್ತದೆ. 2004ರಲ್ಲಿ ಈ ಜೆಂಡರ್ ಬಜೆಟಿಂಗ್ ಎಂಬ ಕಲ್ಪನೆಯನ್ನು ವಾಸ್ತವವಾಗಿ ಮಂಡಿಸಲಾಗಿತ್ತು. ನಂತರ ಮಂಡಿಸಲಾದ ಬಜೆಟ್‌ಗಳಲ್ಲಿ ಜೆಂಡರ್ ಬಜೆಟಿಂಗ್ ಕಲ್ಪನೆ ಎಷ್ಟು ಹಾಸು ಹೊಕ್ಕಿದೆ ಎಂಬುದನ್ನು ವಿಶ್ಲೇಷಿದರೆ ನಿರಾಸೆಯಾಗುತ್ತದೆ. 2004ರಲ್ಲಿ ಜೆಂಡರ್ ಬಜೆಟಿಂಗ್ ಎಂದರೆ ಯೋಜನೆ ಹಾಗೂ ಕಾರ್ಯಕ್ರಮಗಳಿಗೆ ಹಣಕಾಸಿನ ನೆರವು ನೀಡುವುದರ ಮೂಲಕ ಅವು ನೇರವಾಗಿ ಮಹಿಳೆಯರ ಅಭಿವೃದ್ಧಿಗೆ, ಪ್ರಗತಿಗೆ ಸಹಾಯಕವಾಗುವ ದಾರಿಯಲ್ಲಿ ಸಾಗುತ್ತಿವೆ ಎಂದು ಖಚಿತಪಡಿಸಿಕೊಳ್ಳುವುದಾಗಿತ್ತು. ಹಾಗಾಗಿ ವಾಸ್ತವದಲ್ಲಿ ಇರುವ ಮಹಿಳಾಪರ ಯೋಜನೆ, ಕಾರ್ಯಕ್ರಮಗಳೇನು? ಅವು ಬಜೆಟ್‌ನಲ್ಲಿ ಪಡೆದುಕೊಂಡ ಸಹಾಯಧನವೇನು? ಮಹಿಳೆಯರಿಗೆ ಈ ಸಂಪನ್ಮೂಲಗಳು ಸರಿಯಾದ ರೀತಿಯಲ್ಲಿ ತಲುಪುತ್ತಿವೆಯೇ? ಈ ಯೋಜನೆ, ಕಾರ್ಯಕ್ರಮಗಳು ಮಹಿಳೆಯರ ಬದುಕನ್ನು ಒಟ್ಟಾಗಿ ಹಿಡಿದಿಡಬಲ್ಲವೇ? ಎಂಬುದನ್ನು ವಿಮರ್ಶಿಸುವ ಮೂಲಕ ಜೆಂಡರ್ ಬಜೆಟಿಂಗನ್ನು ವಿಶ್ಲೇಷಿಸಲಾಗುತ್ತದೆ.

ದಶಕಗಳಿಂದ ಹೋರಾಡುತ್ತಿರುವ ಮಹಿಳಾಪರ ಹೋರಾಟಗಾರರು ಜೆಂಡರ್ ಬಜೆಟಿಂಗ್‌ಗಾಗಿ ಒತ್ತಾಯಿಸುತ್ತಲೇ ಇದ್ದಾರೆ. ಎಲ್ಲಾ ವರ್ಗದ ಮಹಿಳೆಯರ ಸ್ಥಿತಿ–ಗತಿಗಳನ್ನು ಕೇಂದ್ರವಾಗಿಟ್ಟುಕೊಂಡು ಬಜೆಟ್‌ನ ಪಾಲುಗಾರಿಕೆ ನೀಡಬೇಕಾಗುತ್ತದೆ. ಆದರೆ ಬಜೆಟ್ ಮಂಡನೆಯಲ್ಲಿ ಮಹಿಳೆಯರು ಕೇಂದ್ರ ಬಿಂದುವಾಗಿರುತ್ತಾರೆಯೇ ಎಂಬುದು ಸದಾ ಕಾಡುವ ಪ್ರಶ್ನೆ. 2010–11ರಲ್ಲಿ ಮಹಿಳಾ ಅಭಿವೃದ್ಧಿಗೆ ನೀಡಿದ ಸಹಾಯಧನ 6.1% ಇದ್ದರೆ, 2011–12ರಲ್ಲಿ ಇದು 5.8%ಗೆ ಇಳಿದಿತ್ತು. 2012–13ರಲ್ಲಿ 0.1% ನಷ್ಟು ಮಾತ್ರ ಕಳೆದ ವರ್ಷಕ್ಕಿಂತ ಹೆಚ್ಚಾಗಿದೆ. ಈ ವರ್ಷ ಮಹಿಳಾ ಮತ್ತು ಮಕ್ಕಳ ಖಾತೆಗೆ ಸಂದಿರುವ ಅನುದಾನ 1,85,00 ಕೋಟಿ ಮಾತ್ರ. 12ನೇ ಪಂಚವಾರ್ಷಿಕ ಯೋಜನೆಗೆ ನೇಮಕವಾಗಿರುವ ಮಹಿಳಾಪರ ಹಾಗೂ ಸಬಲೀಕರಣದ ಸಮಿತಿ ಈಗಾಗಲೇ ತನ್ನ ಶಿಫಾರಸ್ಸು ನೀಡಿದೆ. ವಯಸ್ಸಾದ ಹಾಗೂ ಯುವತಿಯರು ಅನುಭವಿಸುತ್ತಿರುವ ಅಸಮಾನತೆಗಳು, ಅನಾನುಕೂಲಗಳನ್ನು ಕುರಿತು ಸರ್ಕಾರ ಮಾತನಾಡಬೇಕಾದ, ಮಧ್ಯಪ್ರವೇಶ ಮಾಡಿ, ಮುಖ್ಯವಾದ ಪಾತ್ರವಹಿಸಿಬೇಕಾದ ಅಗತ್ಯತೆ ಇದೆ ಎಂದು ಸಮಿತಿ ಸರ್ಕಾರಕ್ಕೆ ಸಲಹೆ ಇತ್ತಾಗಲೂ, 12ನೇ ಪಂಚವಾರ್ಷಿಕ ಯೋಜನೆಯ ಮೊದಲ ವರ್ಷವಾದ 2012–13ರಲ್ಲಿ ಕೇಂದ್ರ ಸರ್ಕಾರ ಪ್ರಿಯದರ್ಶಿನಿ, ಸ್ಟೆಪ್, ದುಡಿಯುವ ವರ್ಗದ ಮಹಿಳೆಯರ ಹಾಸ್ಟೆಲ್‌ಗಳಿಗೆ ಮಾತ್ರ ಒಂದು ಅಂಶದಷ್ಟು ಹೆಚ್ಚಿನ ಸಹಾಯಧನ ಪ್ರಕಟಿಸಿದೆ. ಮಹಿಳೆಯರ ಹಕ್ಕುಗಳನ್ನು ರಕ್ಷಿಸಲು ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಬಜೆಟ್ ನೀಡಿರುವ ಅನುದಾನದ ಪ್ರಮಾಣ ಮಹಿಳೆಯರ ಜೀವನ ಕ್ರಮದ ಬಗ್ಗೆ ಅವರಿಗಿರುವ ನಿರ್ಲಕ್ಷವನ್ನು ತೋರಿಸುತ್ತದೆ. ಹಾಗೆಯೇ ಆರ್ಥಿಕ ಕ್ಷೇತ್ರಕ್ಕೆ ಮಹಿಳೆಯರು ಬೆನ್ನೆಲುಬಾಗಿದ್ದಾರೆ ಎಂಬುದನ್ನು ಗಮನಕ್ಕೇ ತೆಗೆದುಕೊಳ್ಳದಿರುವ ಧೋರಣೆಗಳು ಕಂಡುಬರುತ್ತವೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಖಾತೆ ಸಹಾಯವಾಣಿ, ಮಹಿಳಾ ಹಕ್ಕುಗಳ ಬಗ್ಗೆ ದೂರದ ಶಿಕ್ಷಣ, ಕೌಟುಂಬಿಕ ದೌರ್ಜನ್ಯ, ಅತ್ಯಾಚಾರಕ್ಕೊಳಗಾದವರ ಮರುವಸತಿ ಕಾರ್ಯಕ್ರಮಗಳನ್ನೇನೋ ರೂಪಿಸಿಕೊಂಡಿದೆ. ಆದರೆ ಬಜೆಟ್ ನೀಡಿರುವ ಅತ್ಯಲ್ಪ ಅನುದಾನದಲ್ಲಿ ಈ ಯಾವ ಕಾರ್ಯಕ್ರಮಗಳೂ ಮಹಿಳೆಯರನ್ನು ಸ್ಪರ್ಶಿಸುವುದೇ ಇಲ್ಲ. ಸ್ವಂತ ದುಡಿಮೆ ಮಾಡುವ, ವ್ಯವಹಾರ ನಿರತ ಮಹಿಳೆಯರು ಸರ್ಕಾರದ ಸಬಲೀಕರಣದ ಕಲ್ಪನೆಯನ್ನು ಎತ್ತಿ ಹಿಡಿಯುತ್ತಾರಾದರೂ ಇವರ ಬಗ್ಗೆ ಕೂಡಾ ಬಜೆಟ್ ಗಮನ ಹರಿಸಿಲ್ಲ. ಸರ್ಕಾರದ ಅನೇಕ ಯೋಜನೆಗಳನ್ನು ಸಫಲಗೊಳಿಸಲು ಅತ್ಯಲ್ಪ ಸಂಬಳ ಪಡೆಯುವ ಮಹಿಳೆಯರೇ ಆಧಾರವಾಗಿರುತ್ತಾರೆ. 2012–13ರಲ್ಲಿ ಅಸ್ತಿತ್ವ ಕ್ಕೆ ಬಂದ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಮಿಷನ್‌ನ ಆಶಾ ಕಾರ್ಯಕರ್ತೆಯರು ಇಡೀ ಯೋಜನೆಯ ಬೆನ್ನೆಲುಬು. ಆದರೆ ಅವರ ಬಗ್ಗೆಯಾಗಲೀ, ಅಂಗನವಾಡಿ ಕಾರ್ಯಕರ್ತೆಯರ ಬಗ್ಗೆಯಾಗಲೀ ಬಜೆಟ್ ಚಕಾರವೆತ್ತುವುದಿಲ್ಲ. ಜನಗಣತಿಯಿಂದ ಹಿಡಿದು ಮಕ್ಕಳ ಪೌಷ್ಟಿಕತೆ, ಶಾಲೆಯ ದಾಖಲಾತಿ, ಆರೋಗ್ಯ, ಗರ್ಭಿಣಿಯರ ತಪಾಸಣೆ, ಅವರ ಅರಿವು ಹೆಚ್ಚಿಸುವ ಕಾರ್ಯಕ್ರಮ – ಹೀಗೆ ಬೇಕಾದಾಗ ಬಳಸಿಕೊಳ್ಳಬಹುದಾದ ರಿಸರ್ವ ಆರ್ಮಿಯಾಗಿರುವ ಅಂಗನವಾಡಿ ಹಾಗೂ ಆಶಾ ಕಾರ್ಯಕರ್ತೆಯರ ಬಗ್ಗೆ ಸರ್ಕಾರ ಗಮನವನ್ನೇ ಹರಿಸದಿರುವುದು, ಅಸಡ್ಡೆಯನ್ನು ತೋರಿಸುತ್ತದೆ. ಕರ್ನಾಟಕದಲ್ಲಿ 1795 ಅಂಗನವಾಡಿ ಕೇಂದ್ರಗಳನ್ನು ತೆರೆಯಲು ಹಾಗೂ ಅವುಗಳಿಗೆ ಹೊಸ ಕಟ್ಟಡ ಕಟ್ಟಲು

78 ಕೋಟಿ ರೂಗಳನ್ನು ನೀಡಲಾಗಿದೆ. 15 ಕೋಟಿ ರೂಗಳನ್ನು ನಿರ್ವಹಣಾ ವೆಚ್ಚವಾಗಿ ನೀಡಲಾಗುತ್ತಿದೆ. ಆದರೆ ಅಂಗನವಾಡಿ ಶಿಕ್ಷಕಿಯರ ಸಂಬಳದ ಬಗ್ಗೆ ಮಾತನಾಡಿಲ್ಲ. 12.5 ಕೋಟಿ ಹಣವನ್ನು ಕರ್ನಾಟಕದಲ್ಲಿ ಸ್ತ್ರೀ ಶಕ್ತಿ ಸಂಘಟನೆಗಳಿಗೆ ನೀಡಲಾಗಿದೆ. ವಸ್ತು ಮಾರಾಟಕ್ಕೆ ಮೊಬೈಲ್ ವ್ಯಾನ್ ನೀಡುವುದಾಗಿ ಕೂಡಾ ಹೇಳಲಾಗಿದೆ. ಸರ್ಕಾರದ ಈ ಕಾರ್ಯಕ್ರಮ ಸರ್ಕಾರದ ಮಹಿಳಾ ಸಬಲೀಕರಣದ ಕಲ್ಪನೆಯನ್ನು ಎತ್ತಿ ಹಿಡಿಯುತ್ತದೆಯೇ ಹೊರತು ಮಹಿಳೆಯರ ಹಕ್ಕುಗಳನ್ನಲ್ಲ. ಇದಲ್ಲದೇ ಸುಮಂಗಲಿ ಸೇವಾಶ್ರಮಕ್ಕೆ 50 ಲಕ್ಷ, ಬಾಲಭವನಕ್ಕೆ 50 ಕೋಟಿ, ದೈಹಿಕ ನ್ಯೂನ್ಯತೆ ಹೊಂದಿದವರಿಗೆ ಔದ್ಯೋಗಿಕ ಕೇಂದ್ರ ದ ಯೋಜನೆಗೆ ಅನುದಾನ ಸಿಕ್ಕಿದೆ. ಕಳೆದ ಐದು ವರ್ಷಗಳಿಂದ ಮಹಿಳಾ ಹಕ್ಕುಗಳ ಹೋರಾಟಗಾರರು ಜೆಂಡರ್ ಬಜೆಟಿಂಗ್ ಮಾದರಿಯನ್ನು ಮರು ಪರಿಶೀಲಿಸಬೇಕೆಂದು ಒತ್ತಡ ಹೇರಿದ್ದಾಗಲೂ ಯಾವುದೇ ಬದಲಾವಣೆ ಕಂಡುಬಂದಿಲ್ಲ. 2012–13ರ ಬಜೆಟ್ ಕೂಡಾ ಮಹಿಳಾ ಗುಂಪುಗಳ ಅಥವ ಮಹಿಳಾಪರ ಆರ್ಥಿಕ ತಜ್ಞರ ಯಾವುದೇ ಶಿಫಾರಸ್ಸುಗಳನ್ನು ಕೂಡಾ ಗಮನಕ್ಕೆ ತೆಗೆದುಕೊಳ್ಳದಿರುವುದು – ಮಹಿಳೆಯರ ಹಕ್ಕುಗಳನ್ನು ಸಂರಕ್ಷಿಸುವಲ್ಲಿ, ಸರ್ಕಾರಕ್ಕಿರುವ ಇಚ್ಛಾಶಕ್ತಿಯ ಕೊರತೆಯನ್ನು ಎತ್ತಿ ತೋರಿಸುತ್ತದೆ. ಕಳೆದ ಕೆಲವು ವರ್ಷಗಳಲ್ಲಿ ಮಹಿಳಾ ಚಳುವಳಿ ಸರ್ಕಾರದ ಬಜೆಟ್ ಒಳಗೊಳ್ಳಲೇಬೇಕಾದ ಅಂಶಗಳ ಬಗ್ಗೆ ಸರ್ಕಾರಕ್ಕೆ ಬೇಡಿಕೆಗಳನ್ನು ಇತ್ತಿವೆ. ಆ ಬೇಡಿಕೆಗಳು ಈ ಕೆಳಗಿನಂತಿವೆ:

- ಮಕ್ಕಳ ಲಿಂಗ ಅನುಪಾತದ ಸಮಾನತೆ ಕಾಪಾಡಲು 2002ರ ಭ್ರೂಣ ಪರೀಕ್ಷೆ ನಿಷೇಧ ಕಾಯ್ದೆಯನ್ನು ಸರಿಯಾದ ರೀತಿಯಲ್ಲಿ ಜಾರಿಯಾಗುವಂತೆ ನೋಡಿಕೊಳ್ಳುವುದು.
- ಕೌಟುಂಬಿಕ ದೌರ್ಜನ್ಯ ಕಾಯಿದೆ 2005 ವ್ಯವಸ್ಥಿತವಾಗಿ ಜಾರಿಗೊಳ್ಳುವುದು.
- ಸರ್ವಶಿಕ್ಷಣ ಅಭಿಯಾನದಲ್ಲಿ 30% ಅನುದಾನವನ್ನು ಮುದ್ರಣ, ದೃಶ್ಯ–ಶ್ರವಣ ಮಾಧ್ಯಮದಲ್ಲಿ ಪ್ರಚಾರಕ್ಕಾಗಿ ಬಳಸುವುದು.
- ದುಡಿಯುವ ಹಾಗೂ ಬಡತನದ ರೇಖೆಯ ಕೆಳಗೆ ಇರುವ ಓದುವ ಹೆಣ್ಣುಮಕ್ಕಳ ಅನುಕೂಲಕ್ಕಾಗಿ ಕ್ರೇಚ್ ವ್ಯವಸ್ಥೆ ಮಾಡುವುದು.
- ಸಾರ್ವಜನಿಕ ಹಂಚಿಕೆ ವ್ಯವಸ್ಥೆಯಲ್ಲಿ ಒಳ್ಳೆಯ ಆಹಾರ, ಎಣ್ಣೆ, ಸೋಪು ಸರಬರಾಜು ಮಾಡುವುದು.
- ಕೆಲವು ಸಮುದಾಯದಲ್ಲಿ ತಲೆದೋರುವ ಮಾನಸಿಕ ಹಾಗೂ ದೈಹಿಕ ಅಸ್ವಸ್ಥತೆ ಆರೋಗ್ಯ ನಿಗಮ ಸ್ಥಾಪಿಸುವುದು.
- ಬಾಲಕಾರ್ಮಿಕರಿಗೆ, ಬೀದಿ ಮಕ್ಕಳಿಗೆ, ಟ್ರಾಫಿಕಿಂಗ್‌ನಲ್ಲಿ ಇರುವ ಮಕ್ಕಳಿಗೆ ರಕ್ಷಣೆ ಹಾಗೂ ಪುನರ್‌ವಸತಿ ಕಲ್ಪಿಸುವುದು ಹಾಗೂ ಅವರ ಬಗ್ಗೆ ಮಾಹಿತಿ ಸಂಗ್ರಹಣೆ.
- ಕಟ್ಟಡ ಕೆಲಸಗಾರರು, ಚಿಂದಿ ಆಯುವವರು, ಕಸ ಗುಡಿಸುವವರು, ಗಾರ್ಮೆಂಟ್ಸ್ ಕೆಲಸದಲ್ಲಿರುವ ಮಹಿಳೆಯರು, ಸಿಹಿ ತಯಾರಿಸುವ ಕಾರ್ಖಾನೆಯಲ್ಲಿ ಇರುವವರು ಇಂತಹ ಅಸಂಘಟಿತ ವರ್ಗದ ಮಹಿಳೆಯರಿಗೆ ಸಾಮಾಜಿಕ ಭದ್ರತೆ, ಸಾಮಾಜಿಕ ರಕ್ಷಣೆ ಕಾಯ್ದೆ 2008 ಜಾರಿಗೆ ತರುವ ಒತ್ತಾಯ.
- ಮಹಿಳೆಯರ ನೈಪುಣ್ಯತೆ ಹೆಚ್ಚಿಸಲು ಅವರು ಟ್ಯಾಕ್ಸಿ, ಬಸ್ ಚಾಲಕಿಯರಾಗಲು, ಬಡಗಿ, ಟರ್ನರ್‌ಸ್, ಫಿಟ್ಟರ್ಸ್, ಪ್ಲಂಬರ್ಸ್ ಆಗಲು ಸಾಧ್ಯವಾಗುವಂತಹ ಔದ್ಯೋಗಿಕ ತರಬೇತಿ ಸಂಸ್ಥೆ ಸ್ಥಾಪಿಸುವುದು.
- ಮನೆ/ಸೂರು ಇರದಂತಹ ಮಹಿಳೆಯರಿಗಾಗಿ ರಾತ್ರಿ ತಾಣಗಳನ್ನು ನಿರ್ಮಿಸುವುದು
- ಸುರಕ್ಷಿತ ಪ್ರಯಾಣಕ್ಕೆ ಅನುವು ಮಾಡಿಕೊಡುವುದು.
  ಚೆನ್ನಾಗಿ ನಿರ್ವಹಿಸಲ್ಪಡುವ ಸಾರ್ವಜನಿಕ ಶೌಚಾಲಯ
- ಆರ್ಥಿಕತೆಯಲ್ಲಿ ಮಹಿಳೆಯರ ಕೊಡುಗೆಯನ್ನು ಗುರುತಿಸಿ, ಬಜೆಟ್‌ನಲ್ಲಿ ಅವರನ್ನು ಕೇಂದ್ರ ಬಿಂದುವಾಗಿ ಪರಿಗಣಿಸುವುದು.
- ಭೂಮಿಯ ಹಕ್ಕು, ಖಾತೆ, ಪಹಣಿಗಳ ಮೇಲೆ ಮಹಿಳೆಯರ ಹಕ್ಕು ಗುರುತಿಸುವುದು.
- ಮಹಿಳೆಯರಿಗೆ ಸಾಲದ ಸಬ್ಸಿಡಿ ನೀಡುವುದು
- ಆಹಾರ ಭದ್ರತೆಯ ಬಿಲ್ ಸರಿಯಾದ ರೀತಿಯಲ್ಲಿ ಜಾರಿಗೆ ಬರುವಂತೆ ಮಾಡುವುದು.
- ರೈತ, ಆದಿವಾಸಿ, ಅಲ್ಪಸಂಖ್ಯಾತರು ಹಾಗೂ ಲೈಂಗಿಕ ಅಲ್ಪಸಂಖ್ಯಾತರ, ಒಂಟಿಮಹಿಳೆಯರ ಹಕ್ಕುಗಳನ್ನು ರಕ್ಷಿಸುವುದು.

ಈ ಎಲ್ಲಾ ಬೇಡಿಕೆಗಳು ಸದ್ಯದ ವಾಸ್ತವದಲ್ಲಿ ಗಗನ ಕುಸುಮಗಳಾಗಿ ಕಾಣಿಸಬಹುದು. ಆದಾಗ್ಯೂ ಇಂತಹ ವಾಸ್ತವ ಸತ್ಯಗಳನ್ನು ಗಮನಿಸಿ, ಅವುಗಳಿಗೆ ಸ್ಪಂದಿಸುವ ರೀತಿಯಲ್ಲಿ ಯೋಜನೆಗಳು/ಕಾರ್ಯಕ್ರಮಗಳು ರೂಪಿತವಾದರೆ, ಇವುಗಳಿಗೆ ಬಜೆಟ್‌ನಲ್ಲಿ ಅನುದಾನ ದೊರೆಯುವಂತಾದಾಗ ಮಾತ್ರ ನಿಜವಾದ ಅರ್ಥದಲ್ಲಿ ಜೆಂಡರ್ ಬಜೆಟಿಂಗ್ ಆಗುತ್ತದೆ. ಬಜೆಟ್‌ನಲ್ಲಿ ಅನುದಾನ ಕೊಡಲಾದ ಸಂಪನ್ಮೂಲಗಳು ಮಹಿಳೆಯರನ್ನು ತಲುಪುವುದಿಲ್ಲ. ಅದಕ್ಕಾಗಿ ಅವು ಸಂಬಂಧಿಸಿದ ಮಹಿಳೆಯರಿಗೆ ತಲುಪಿಸುವಲ್ಲಿ ಸರ್ಕಾರದ ಮೇಲ್ವಿಚಾರಣೆಯೂ ಮುಖ್ಯವಾಗುತ್ತದೆ. ಸರ್ಕಾರ ಹಾಗೂ ಪ್ರಭುತ್ವಗಳು ಮಹಿಳೆಯರ ಬಗೆಗಿನ ಧೋರಣೆಯಲ್ಲಿ ಪಿತೃಪ್ರಧಾನ ಹಾಗೂ ಬಂಡವಾಳಶಾಹಿ ತತ್ವದ ಮೌಲ್ಯಗಳನ್ನು ಹೊಂದಿರುವವರೆಗೆ ಮೂಲಭೂತವಾಗಿ ಬದಲಾವಣೆಗಳು ಸಾಧ್ಯವಾಗದು. ಮಹಿಳಾ ಹಕ್ಕುಗಳ ಬಗ್ಗೆ ಇಡಿಯಾದ ಚಿಂತನೆ ಇಲ್ಲದ, ತಾತ್ವಿಕ ಒಳನೋಟವಿಲ್ಲದಿರುವ ಇಂತಹ ಸರ್ಕಾರಗಳು ಜೆಂಡರ್ ಬಜೆಟಿಂಗ್ ಮಂಡಿಸುತ್ತಾರೆ ಎಂಬುದು ಕನಸಿನ ಮಾತು. ಆದರೂ ಮಹಿಳಾ ಹೋರಾಟದ ಭಾಗವಾಗಿ ಜೆಂಡರ್ ಬಜೆಟಿಂಗ್‌ಗೆ ಸರ್ಕಾರದ ಮೇಲೆ ಮಹಿಳೆಯರು ಒತ್ತಡ ಹೇರುತ್ತಲೇ ಇರುತ್ತೇವೆ. ❑

**ಗೆಳತಿಯರೇ, ಬೆಂಬಲಿಗರೇ**

'ನಮ್ಮ ಮಾನಸ ಸಂಚಿಕೆ' ಮತ್ತೊಮ್ಮೆ ಸದಾ ನಮ್ಮೊಡನಿರಲು ಸಹಕರಿಸುತ್ತಿರುವ ಪ್ರತಿಯೊಬ್ಬರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು. ಕಳೆದ ಮಾರ್ಚ್ ಮತ್ತು ಏಪ್ರಿಲ್ ಸಂಚಿಕೆ 2012ರನ್ನು 'ನಮ್ಮ ಮಾನಸ' ಹೊರತರುವಲ್ಲಿ ಆರ್ಥಿಕ ನೆರವು ನೀಡಿ ನಮ್ಮನ್ನು ಪ್ರೋತ್ಸಾಹಿಸಿದವರು: ಶಾರದ ಬಿ.ಎನ್, ನೀಲಾಂಜನ, ದು.ಸರಸ್ವತಿ, ಸುಪ್ರಿಯ, ಗೀತ, ಸವಿತ, ಲೇಖಾ ಅಡವಿ, ನಿರ್ಮಲ, ಮೇಘವರ್ಷ, ನಬಾನ್ ಅಲ್ತಾಫ, ಅಕ್ಷತ, ಅರುಣ್.ಸಿ, ಮಹಲಿಂಗಮ್ಮ, ಶಂಕರ್‌ರಾಜಕುಮಾರ್, ಹೇಮಲತಾ ಹೆಚ್.ಎನ್, ಶಾಮಲ ಪ್ರಕಾಶ್, ಕೆ.ಜಿ.ಗಣೇಶ್, ನಿರ್ಮಲ ಪ್ರಸನ್ನ, ಶಶಿಕಲಾ ಶ್ರೀನಿವಾಸ್.

ಲೇಖನ, ಪತ್ರಗಳ ಮೂಲಕವೂ ನಮ್ಮ ಉತ್ಸಾಹವನ್ನು ಇಂಗದಂತೆ ನೋಡಿಕೊಳ್ಳುತ್ತಿರುವ ನಿಮ್ಮೆಲ್ಲರಿಗೂ ಮಾನಸ ಬಳಗ ಸದಾ ಋಣಿ. ಮುದ್ರಣಕ್ಕೆ ನೆರವಾಗುತ್ತಿರುವ 'ಇಳಾ'ದವರಿಗೂ ಕೃತಜ್ಞತೆಗಳು.



# ನಿರ್ವಸಾಹತೀಕರಣಕ್ಕೆ ದಾರಿದೀಪಗಳು

■ ಡಾ॥ ಸರಸ್ವತಿ ಕೆ.ಬಿ

ಸ್ತ್ರೀವಾದೀ ಹೋರಾಟಗಳು Personal is political ಎಂದು ಶುರುವಾಗಿ, Women Rights are Human Rights ಎಂದು ಮುಂದುವರೆದು, ಈಗ Feminism is a way of living ಆಗಿ ನಮ್ಮ ನಡುವೆಯಿರುವುದು ನಾವೆಲ್ಲರೂ ಒಪ್ಪಿಕೊಳ್ಳಬೇಕಿರುವ ಸತ್ಯ.

ಸ್ತ್ರೀವಾದವು ಹೇಗೆ ನಮ್ಮೆಲ್ಲರ ಬಾಳಿನ ಭಾಗವಾಗಿದೆ ಎಂದು ಮತ್ತೆ ವಿವರಿಸಿಕೊಳ್ಳಬೇಕಾಗಿದೆ. ನಾವೀಗ ಮಾತು ಬಲ್ಲೆವು, ಆದರೆ ಮೌನದಲ್ಲಿ ಬದುಕುತ್ತಿರುವ ಸಮೂಹವನ್ನು ಮರೆಯುವಂತಿಲ್ಲ. ನಾಲಿಗೆ ಬಾರದ ಲಕ್ಷಾಂತರ ಮಂದಿ ಮಹಿಳೆಯರು ಅಸಹಾಯಕತೆಯಿಂದ ಮೌನವಾಗಿದ್ದರೆ, ಪ್ರಭುತ್ವದ ಮಾತು ಬಲ್ಲವರು (ಮಹಿಳೆಯರನ್ನೂ ಒಳಗೊಂಡಂತೆ) ಮೌನವಾಗಿದ್ದುಕೊಂಡೇ ಸಮುದಾಯಗಳ ವಿರುದ್ಧ ಪ್ರತಿತಂತ್ರಗಳನ್ನು, ಪ್ರಭುತ್ವದ ಆಜ್ಞೆಯ ಪ್ರಕಾರ, ರೂಪಿಸುತ್ತಲೇ ಇದ್ದಾರೆ. ಸೃಜನಶೀಲ ಮನಸ್ಸುಗಳಿಗೆ ಮೌನವೆಂಬ ಒಗಟನ್ನು ಬಿಡಿಸುವುದು ಯಾವತ್ತೂ ಒಂದು ಸವಾಲೇ ಆಗಿದೆ.

ಮಾತು-ಮೌನಗಳ ಸಂಘರ್ಷದ ತೀವ್ರತೆ ಆಧುನಿಕ ಬದುಕಿನ ಲಯವನ್ನು ನಡೆಸುತ್ತಿದೆ. ಸರ್ವಾಧಿಕಾರಿ ಮನಃಸ್ಥಿತಿಗಳನ್ನು ಅರ್ಥಮಾಡಿಕೊಳ್ಳಲು/ಪ್ರತಿರೋಧದ ಅಸಹಾಯಕತೆಯನ್ನು ಗ್ರಹಿಸಲು, ಅವೆರಡೂ ಸ್ಥಿತಿಗಳ ಕೆಮಿಸ್ಟ್ರಿಯನ್ನು ಅಭ್ಯಾಸ ಮಾಡುವುದು ಮತ್ತು ಆ ಮೂಲಕ ದಬ್ಬಾಳಿಕೆಯನ್ನೂ, ಅದರ ಪವರ್ ಇಕ್ವೇಶನ್‌ಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವುದು ಹೊಸ ಸ್ತ್ರೀವಾದೀ ಓದುಗಳ ಕ್ರಮವಾಗಬೇಕಿದೆ.

ಬಂಡವಾಳಶಾಹಿ/ಜಮೀನ್ದಾರಿ ವ್ಯವಸ್ಥೆಗಳು, ಸಮುದಾಯಗಳನ್ನು ಎದುರಾಗುವ ಕ್ರಮಗಳು ಇತ್ತೀಚಿಗೆ ಹೊಸರೂಪತಾಳುತ್ತಿವೆ. They are changing the strategies of addressing people and their capabilities. ಜನರ ಪ್ರತಿರೋಧನೆಯ ಶಕ್ತಿಸಾಮರ್ಥ್ಯವನ್ನು ಕುಗ್ಗಿಸುವ ಹುನ್ನಾರಗಳು ಸ್ಪಷ್ಟವಾಗಿ ಗೋಚರವಾಗುತ್ತಿವೆ. ಬದುಕಿನೊಂದಿಗಿನ ಸಂಬಂಧ ಮತ್ತು ಅದರೊಂದಿಗಿನ ಅರಿವು ಕಡಿಮೆಯಾದಂತೆಲ್ಲಾ ನಾವು ಹೆಚ್ಚು ಹೆಚ್ಚಾಗಿ ಮೋಸಹೋಗುವುದು ನಿಯಮವಾಗುತ್ತದೆ.ಇಂತಹ ಆತಂಕಕಾರಿ ಬೆಳವಣಿಗೆಗಳನ್ನು ಗಮನಿಸದೇ ಹೋದರೆ ನಾವು ಕೇವಲ ಗ್ರಾಹಕರಾಗುತ್ತೇವೆಯೇ ಹೊರತು ಜವಾಬ್ದಾರೀ ಸಮುದಾಯದ ಭಾಗವಾಗುವುದಿಲ್ಲ.

ಪ್ರತಿರೋಧವು ಪ್ರಜಾಪ್ರಭುತ್ವದ ಮೂಲಭೂತ ಸ್ಥಿತಿ. ಆದರೆ ನಾವು ಹೆಚ್ಚು ಹೆಚ್ಚು ಮೌನವಾಗುತ್ತಿದ್ದೇವೆ (ಉಪೇಕ್ಷೆಯಿಂದಲೋ ಅಥವಾ ಅಜ್ಞಾನದಿಂದಲೋ ಕಾಣೆ) ಮತ್ತು ಸರ್ವಾಧಿಕಾರಿ ಶಕ್ತಿಗಳು ಮೌನದ ಅಸ್ತ್ರವನ್ನೇ ಹಿಡಿದು ತಂತ್ರಗಳನ್ನು ರೂಪಿಸುತ್ತಿವೆ. ಇರಾನ್-ಇರಾಕ್ ಯುದ್ಧಗಳು/ ಆಫ್ರಿಕಾದಲ್ಲಿ ನಡೆಯುತ್ತಿರುವ ಕುಲ-ಕುಲಗಳ ನಡುವಿನ ಹೋರಾಟದ ಕಥೆಗಳು ಸಮುದಾಯದ ಬದುಕನ್ನು ನಾಶ ಪಡಿಸುವ/ಯಾದವೀ ಕಲಹವನ್ನು ಉಂಟುಮಾಡುವ ಜವಾಬ್ದಾರಿಯನ್ನು, ಸಮುದಾಯಗಳೇ ಹೊರುವಂತೆ ಮಾಡುವ ಪ್ರಭುತ್ವದ ಹುನ್ನಾರಗಳನ್ನು ಎತ್ತಿತೋರಿಸುತ್ತವೆ. ಇಂತಹ ಪ್ರಯತ್ನಗಳು ಸಾಮೂಹಿಕ ಬದುಕಿನಲ್ಲಿ ಇರುವ ಸುರಕ್ಷಿತ ಪ್ರಜ್ಞೆಯನ್ನು ಛಿದ್ರಗೊಳಿಸುತ್ತಿವೆ. ಸುರಕ್ಷಾಸ್ಥಿತಿಯನ್ನೂ, ಭದ್ರತೆಯ ನೆನಪನ್ನೂ, ನಮ್ಮ ಕಾಲ ದೇಶಗಳ ಪ್ರಜ್ಞೆಯನ್ನೂ ರಕ್ಷಿಸಿಕೊಳ್ಳಲು ಸ್ತ್ರೀವಾದೀ ಓದುಗಳು ಸಹಾಯಕ. ಸ್ತ್ರೀವಾದೀ ಪರಂಪರೆಯ ನೆನಪಿನ ಬುತ್ತಿಯಲ್ಲಿ ವಸಹಾತೀಕರಣದ ಜಾಲದಿಂದ ತಪ್ಪಿಸಿಕೊಳ್ಳುವ ಉಪಾಯಗಳು ಹಾಸುಹೊಕ್ಕಾಗಿವೆ. ಸ್ತ್ರೀಭಾಷೆ ಅಂತಹ ಒಂದು ಮಾರ್ಗ. ಆದರೆ.....

**ಭಾಷೆ ಮತ್ತು ದಿಕ್ಕು ತಪ್ಪಿಸುತ್ತಿರುವ ಪದಗುಚ್ಚಗಳು**

ಭಾಷೆಯೆಂಬುದು 'ಬದುಕು' ಎಂಬ ಹಾದಿಗೆ ಬದ್ಧವಾಗಿರುವಂತಹದ್ದು. ಬದುಕಿನಿಂದ, ಬದುಕಿಗಾಗಿ, ಬದುಕಿಗೋಸ್ಕರ ಹುಟ್ಟಿದ ಪದಗಳು ಭಾಷೆಯನ್ನು ಕಟ್ಟುತ್ತವೆ. ಬೇರುಗಳನ್ನು ಬಿಡುತ್ತವೆ. ಸ್ತ್ರೀ ಭಾಷೆಗೆ ಈ ಲಕ್ಷಣಗಳಿವೆ. ಇಂದು ಸಂಸ್ಕೃತಿಗಳು ಎದುರಿಸುತ್ತಿರುವ ತೀವ್ರವಾದ ಸವಾಲುಗಳಲ್ಲಿ ಮುಖ್ಯವಾಗಿ ಹೆಸರಿಸಬಹುದಾದವೆಂದರೆ ಸಮುದಾಯ ಪ್ರಜ್ಞೆಯನ್ನು ಮರೆತ ವೈಯುಕ್ತಿಕ ಬಾಳ್ವೆ, ಗ್ರಾಹಕ ಮನೋಭಾವ ಮತ್ತು ಸ್ವಾರ್ಥ. ಇವುಗಳನ್ನು ಪೋಷಿಸುತ್ತಿರುವ ಭಾಷೆ ಆಳುವವರ ಭಾಷೆಯೇ ಆಗಿರುತ್ತದೆ. ವೈಯುಕ್ತಿಕ ರೀತಿಯ ಬದುಕು ಹೆಚ್ಚಾದಂತೆಲ್ಲಾ ನಮ್ಮ ಗ್ರಹಿಕೆಗಳು ಸುಖಃ-ದುಃಖ, ಹೆಚ್ಚು-ಕಡಿಮೆ, ಲಾಭ-ನಷ್ಟ, ಮೊದಲು-ಕೊನೆ, ಸ್ವರ್ಗ-ನರಕ ಎಂಬ ದ್ವಯಗಳಿಗೆ ಸೀಮಿತವಾಗುತ್ತವೆ; ಸುಲಭವಾಗಿ ವೈವಿಧ್ಯಮಯವಾದ ಬದುಕಿನ ಅನೇಕ ಸಮೀಕರಣ-ಸಂಕಲನಗಳು ದ್ವಯವಾಗಿ ಭಾಷೆ ಸೊರಗ ತೊಡಗುತ್ತದೆ. ಬೇರುಗಳಿಲ್ಲದ ಪದಗಳ ಬಳಕೆ ಹಾಗು ಅನುಷ್ಠಾನದಿಂದ ಭಾಷೆಗಳು ಅವನತಿಯ ಹಾದಿ ಹಿಡಿದಿವೆ. ಆದುನಿಕ ಯುಗವು ಹೆಚ್ಚು ಹೆಚ್ಚು ಶಿಕ್ಷಿತರನ್ನು ಉತ್ಪಾದಿಸುತ್ತಿದೆ. ವಿಪರ್ಯಾಸವೆಂದರೆ ಇದೇ ಯುಗವು ಸಾವಿರಾರು ಭಾಷೆಗಳ ಅಸ್ತಿತ್ವಕ್ಕೆ ಭಂಗ ತಂದಿದೆ.

Munir Fasheh JA & Palestine 20ನೇ ಶತಮಾನದಲ್ಲಿ ಹೆಚ್ಚಾಗಿ ಚಾಲನೆಗೆ ಬಂದ ಬೇರುಗಳಿಲ್ಲದ ಪದಗುಚ್ಚಗಳೆಂದು ಇವುಗಳನ್ನು ಗುರುತಿಸುತ್ತಾರೆ: ಅಭಿವೃದ್ಧಿ, ರಾಷ್ಟ್ರೀಯತೆ, ಬೆಳವಣಿಗೆ, universal thinking, ಶಿಕ್ಷಣ, ಮೂಲಭೂತ ಸೌಕರ್ಯ, ಮಾನವ ಹಕ್ಕುಗಳು, knowledge society, ಯೋಜನೆ, ಐಡೆಂಟಿಟಿ, ಪ್ರಜೆ, ಜಾಗತೀಕರಣ, ಮಾಹಿತಿ, ಮೌಲ್ಯೀಕರಣ ಮತ್ತು ಸಾಮರ್ಥ್ಯ ನಿರ್ಮಾಣ. ಬದುಕಿನಿಂದ ಕಲಿತ ಪಾಠಗಳು ಅರ್ಥ ಪಡೆದು ಪದಗಳಾಗಿ ರೂಪಗೊಂಡರೆ ಅವು ಸಂಸ್ಕೃತಿಯ ಸತ್ವವನ್ನು ಬಿಂಬಿಸುತ್ತಿರುತ್ತವೆ; ಅದನ್ನು ಬಿಟ್ಟು ಸಾಂಸ್ಥೀಕರಣಗೊಂಡಂತಹ ಒಂದು

ವಿಶ್ವಬ್ಯಾಂಕ್‌ನಂತಹ ಸಂಸ್ಥೆ, ಅಮೇರಿಕಾದಂತಹ ರಾಷ್ಟ್ರ, ಕಾರ್ಪೋರೇಟ್‌ಗಳು ನಮ್ಮ ಸಮುದಾಯಗಳ ನಡೆಯನ್ನು ತೀರ್ಮಾನಿಸುತ್ತಿದ್ದರೆ, ನಮ್ಮ ಭಾಷೆಯನ್ನು ಕಟ್ಟುತ್ತಿದ್ದರೆ ಅದು ವಸಾಹಾತೀಕರಣಗೊಂಡ ದಾಸ್ಯಕ್ಕೆ ಒಳಪಟ್ಟ ಭಾಷೆಯೇ ಸರಿ.

ಸಮುದಾಯದ ತಿಳಿವಿನಿಂದ ಬರುವ 'ಕಲಿಕೆ' ಡಿಗ್ರಿಗಳನ್ನು ನೀಡುವ 'ಶಿಕ್ಷಣ'ವಾದೀತು ಹೇಗೆ? 'ಅಂಚಿನಲ್ಲಿರುವ ಜನ'ರೆಂದರೆ ಅವರಿಗೊಂದು ಹೆಸರು, ಘನತೆ, ಜ್ಞಾನ ಇಲ್ಲವೆಂದೇ? ಒಳ್ಳೆಯ 'ಪ್ರಜೆ' ಕಣ್ಣುಮುಚ್ಚಿ ರಾಜ್ಯದ ನಿಯಮಗಳನ್ನು ಅನುಸರಿಸಿದರೆ, ಒಳ್ಳೆಯ 'ಮನುಷ್ಯ'ಳು ಮನಸ್ಸು ಮತ್ತು ಬುದ್ಧಿಯಿಂದ ವಿಚಾರಿಸಿ ಪ್ರಕೃತಿಯ ನಿಯಮಗಳಿಗಷ್ಟೇ ಬದ್ಧಳಾಗಿರುತ್ತಾಳೆ. ದಿಕ್ಕು ತಪ್ಪಿಸುತ್ತಿರುವ ಈ ಪದಗುಚ್ಛಗಳು ಸಮುದಾಯದೊಳಗಿನ immunity ಯನ್ನು ಹಾಳು ಮಾಡುವ AIDS ವೈರಾಣುಗಳೆಂದೇ Munir Fasheh ತನ್ನ ಲೇಖನ 'Bombardment by Rootless and Cluster Words'ನಲ್ಲಿ ಗುರುತಿಸುತ್ತಾರೆ.

**ಸಾಂಸ್ಥೀಕರಣ ಮತ್ತು ವೈಚಾರಿಕತೆ**

ನಾವು ಹೆಚ್ಚು ಹೆಚ್ಚು ಸಾಂಸ್ಥೀಕರಣ ಗೊಂಡಂತೆಲ್ಲಾ ನಾವು ಬಾಳುವ ಬದುಕಿಗೆ ಪುರಾವೆ ಪ್ರಮಾಣಗಳನ್ನು ಬಯಸುತ್ತೇವೆ. ಯಾವುದೇ ತರಹದ ಸಾಂಸ್ಥೀಕರಣಗಳು, ಧಾರ್ಮಿಕ, ರಾಜ್ಯ, ಕುಟುಂಬ, ಶಿಕ್ಷಣ, ಅಕಾಡೆಮಿಕ್ ವಲಯಗಳಲ್ಲಿ ಅಭದ್ರತೆಯನ್ನು ಉಂಟು ಮಾಡುತ್ತಿದ್ದರೂ ಕೂಡ, ತಮ್ಮೆಲ್ಲಾ ಕೆಲಸಗಳು ಜನರ ಸುರಕ್ಷತೆಗಾಗಿಯೇ ಇವೆ ಎಂಬ ಭ್ರಮೆಯನ್ನು ಬಿತ್ತುತ್ತಿರುತ್ತವೆ. ವೈಚಾರಿಕ ಪ್ರಜ್ಞೆಯನ್ನು ಕಳೆದು ಕೊಂಡರೂ ಪರವಾಗಿಲ್ಲ ಸಂಸ್ಥೆಯ ಉಳಿವು ಮುಖ್ಯ ಎಂಬ ಧೋರಣೆಯನ್ನು ನಮಗೆ ಕಲಿಸುತ್ತವೆ. ಯಾವುದೇ ತರಹದ ನಿಶ್ಚಿತ ಸಾಂಸ್ಥೀಕರಣವನ್ನು ಸ್ತ್ರೀವಾದೀ ಓದುಗಳು ನಿರಾಕರಿಸಬೇಕು. ಯಾವುದೇ ಸಾಂಸ್ಥಿಕ/ಧಾರ್ಮಿಕ ಶಿಕ್ಷಣವನ್ನು ಪಡೆಯದೆಯೇ, ಅಕ್ಷರ ಬಾರದಿದ್ದರೂ ಸಹ ಬದುಕನ್ನು, ಅದರ ಧರ್ಮವನ್ನು ಅರಿತು, ಅನುಭವಿಸಿ, ಬಾಳಿ ಬೆಳಗಿದ ಅನೇಕ ಚೇತನಗಳು ಉದಾಹರಿಸಲು ಸಿಗುತ್ತಾರೆ.

ವಸಾಹತಿನ ಹಿಡಿತಕ್ಕೆ ಒಳಗಾದ ವಿವೇಕ imported ಆಗಿ ಬರುವ ಯಾವುದೇ ಪದವನ್ನೂ, ಬದುಕನ್ನೂ, ಸಂಸ್ಕೃತಿಯನ್ನೂ ಸಲೀಸಾಗಿ ಒಪ್ಪಿಕೊಂಡು ಅನುಸರಿಸುತ್ತದೆ. ಅದು ಬದುಕಲ್ಲ, ಬದುಕಿನ ನಟನೆಯಷ್ಟೇ. ನಿರ್ವಸಹಾತೀಕರಣದ ರೀತಿಯ ಬದುಕನ್ನು ಬಾಳಲು, ಸಮುದಾಯಗಳನ್ನೇ ದೇಹವೆಂದು ಪರಿಭಾವಿಸಲು, ಸಾಂಸ್ಥಿಕ ರೀತಿಯ ಬದುಕನ್ನು ಅಮಾನ್ಯಮಾಡುವ ಉದಾಹರಣೆಗಳನ್ನು 'ನಮ್ಮ ಮಾನಸ' ಎತ್ತಿ ತೋರಿಸಿದೆ. ಅದರ ಸಾಮರ್ಥ್ಯ ಹೆಚ್ಚಲಿ.

ಇದು ನಾಗರೀಕತೆಗಳು ಸಂವಾದ ನಡೆಸುತ್ತಿರುವ ಕಾಲ. ಆಯ್ಕೆ ನಮ್ಮದು. ಯಾವ ನಾಗರೀಕತೆ ನಮ್ಮದು; ರಾಜನದೋ, ಸಮುದಾಯದೋ? ಚಳುವಳಿಗಳು ಯಾಕೆ ಕ್ರಿಯಾಹೀನವಾಗುತ್ತಿವೆ? ಅರ್ಥ ಕಳೆದುಕೊಳ್ಳುತ್ತಿವೆ? ನಮ್ಮ ಸತ್ವ ಎಲ್ಲಿ ರಾಜಿಯಾಗುತ್ತಿದೆ? ಇಂತಹ ಅನೇಕ ಪ್ರಶ್ನೆಗಳು ನಮ್ಮ ನಡುವೆ ಉಳಿಯುವಂತಾಗಬೇಕು. ಇಂತಹ ಪ್ರಯತ್ನಗಳಿಗೆ 'ನಮ್ಮ ಮಾನಸ'ದಂತಹ ಅಕ್ಷರ ನೆರವು ಅವಶ್ಯಕ.

*Munis Fasheh in "Asking we walk" (The South as new Political Imaginary) edt by Corinne Kumar.*

# ಸಂತೆ ಸಾಹಿತ್ಯ

ಈಗಷ್ಟೇ ಅರಿವಿನುದಯವಾಯಿತು
ಅವಳಿಗೆ
ಅವಳು ಕಾಲಿಟ್ಟಿದ್ದು
ದೋಡ್ಡ ... ಸಂತೆಯೊಳಗೆಂದು
ಇಲ್ಲಿ ತಾನೊಂದು
ಸಂದು ಮೂಲೆಯಲಿ ಕೂತರೆ
ಕೆಲಸ ನಡೆಯಲಾರದೆಂದು
ಇಲ್ಲಿ ಜನ ತಮತಮಗೆ
ಬೇಕಾದ್ದು ಕೊಂಡು
ಕೊಳಲಾಗದಿದ್ದಾಗ
ಇಲ್ಲದ ಗುಣವೆತ್ತಿ ಆಡುತ್ತಾರೆ
ಜಾಣ ಕಿವುಡಲ್ಲದೆ ಬೇರೆ
ಗತಿಯಿಲ್ಲವೆಂದು

* * *

ತೆರೆದಿಟ್ಟಹರು ಇಲ್ಲಿ ಒಬ್ಬೊಬ್ಬರೂ
ಒಂದೊಂದು ಮಳಿಗೆಯ
ಒಬ್ಬ ಹೇಳುತ್ತಾನೆ
ತನ್ನ ಸಿದ್ಧಾಂತ ಬಿಟ್ಟರೆ ಉಳಿದವೆಲ್ಲಾ
ಲಂಡು ಲಸ್ಕು
ಇನ್ನೊಬ್ಬ ಹೇಳುತ್ತಾನೆ
ತನ್ನದೇನಿದ್ದರೂ ಇಂಟರ್‌ನ್ಯಾಷನಲ್
ಮತ್ತೊಬ್ಬನದು ದೇಸಿಚಹರೆಯ ನಿಷ್ಠೆ
ಇದ್ಯಾವುದೂ ಅಲ್ಲದ ಗೂಳಿ
ಸಂತೆ ತುಂಬಾ ಓಡಾಡುತ್ತದೆ
ಕೇಳುವವರನ್ನೂ ಧಿಕ್ಕರಿಸುತ್ತದೆ
ಬಹಳ ಹುಮ್ಮಸ್ಸಿನಲಿ
ತನ್ನದೂ ಒಂದು ಬುಟ್ಟಿ
ಹೊತ್ತು ತಂದವಳೇ – ಇಗೋ ಕೇಳು
ಒಂದೋ ಬರಲೇ ಬೇಡ
ಇಲ್ಲ, ಬಂದರೂ ಬಸವಳಿಯಬೇಡ
ಬುಟ್ಟಿ ತೆರೆದಿಟ್ಟ ಮೇಲೆ
ಕಿವಿ ಮುಚ್ಚಿಟ್ಟು ಕೂರು
ಇದು ಫ್ರೆಶ್ಶಿಲ್ಲ, ಇದು ರುಚಿಯಿಲ್ಲ
ಇದಕ್ಕೆ ಬಣ್ಣ ಇಲ್ಲ, ಇದಕ್ಕೆ ಗುಣವಿಲ್ಲ
ಇಲ್ಲ ಇಲ್ಲ ಇಲ್ಲ
ಹಾಗಂತ ಬುಟ್ಟಿ ಖಾಲಿಯಾಗದೆ
ಉಳಿಯಲೂ ಇಲ್ಲ

* * *

ಧರಿಸು ಕಿರುನಗು
ನಡೆ ದಾರಿ ಮಾಡಿಕೊಂಡು
ಇದು ದೋಡ್ಡ ಸಂತೆ
ಇಲ್ಲಿದೆ ನಿನಗೂ ಒಂದು
ಜಾಗ – ಮೂಲೆಯೋ
ಮುದುಕೋ ಎಂತದೋ ಒಂದು..



■ ಸಬಿತಾ ಬನ್ನಾಡಿ

ಚಿತ್ರ: ನಿಹಾರಿಕ ಶೆಣೈ



# ಆಯ್ಕೆಯ ಹಕ್ಕು ಮತ್ತು ಯುವಜನತೆ

■ ಲವಿತ್ರ ವಸ್ತ್ರದ್, ಗುಲಬರ್ಗಾ

ನಮ್ಮ ದೇಶದ ಸಂಪೂರ್ಣ ಜನಸಂಖ್ಯೆಯಲ್ಲಿ ಪ್ರತಿಶತ 40ಕ್ಕಿಂತಲೂ ಹೆಚ್ಚು ಯುವ ಜನರಿದ್ದಾರೆ. ಭಾರತ ಕೃಷಿ ಆಧಾರಿತ ದೇಶ. ಅನೇಕ ಸಂದರ್ಭಗಳಲ್ಲಿ ಅಕಾರಣವಾಗಿ ಹಳ್ಳಿಯ ಯುವಜನತೆಗೆ ನಗರದ ಯುವಜನ ಮಾದರಿ ಆಗುತ್ತಾರೆ. ಆದರೆ ನಗರಗಳಲ್ಲಿರುವ ಬಹಳಷ್ಟು ಯುವಜನತೆ ಭ್ರಮೆಗಳಲ್ಲಿ ಬದುಕುತ್ತಿರುತ್ತಾರೆ. ಅವರದ್ದು ಆದರ್ಶಗಳಿಲ್ಲದ ಮತ್ತು ಜೀವನಕ್ಕೆ ಬೇಕಾದ ಮುಖ್ಯ ತಳಪಾಯವಿಲ್ಲದ ಜೀವನವಾಗಿದೆ. ಅದರಲ್ಲಿಯೂ 1991ರ ಉದಾರೀಕರಣ, ಜಾಗತೀಕರಣ, ಖಾಸಗೀಕರಣದ ನೀತಿಗಳು ಭಾರತದಲ್ಲಿ ಕಾಲಿಟ್ಟ ನಂತರ ಯುವಕರಲ್ಲಿ ಆದರ್ಶರಹಿತ ಜೀವನಶೈಲಿ ಹೆಚ್ಚಾಗಿದೆ. ಅಲ್ಲದೆ ಯುವಜನರಲ್ಲಿ ಆತ್ಮಸ್ಥೈರ್ಯ, ಭವಿಷ್ಯದ ಭರವಸೆಗಳನ್ನು ಕಡಿಮೆ ಮಾಡುತ್ತಿವೆ. ಅನರ್ಥಕಾರಿ ವಿಚಿತ್ರ ಆಕರ್ಷಣೆಗಳು ಅವರನ್ನು ಸೆಳೆಯುತ್ತಿವೆ. ಇದರಿಂದ ಯುವಜನರಲ್ಲಿ ವೈಭೋಗದ ಬಯಕೆ ಅಥವ ಪಲಾಯನವಾದ ಹೆಚ್ಚುತ್ತಿದೆ. ಆದ್ದರಿಂದಲೇ ಭಾರತದಲ್ಲಿ ದಾಖಲಾಗಿರುವ ಒಟ್ಟು ಆತ್ಮಹತ್ಯೆಗಳ ಅಂಕಿಸಂಖ್ಯೆಗಳ ಪ್ರಕಾರ ಶೇ.71 ರಷ್ಟು ಪ್ರಕರಣಗಳಲ್ಲಿ 44 ವರ್ಷದ ಒಳಗಿನವರು ಆತ್ಮಹತ್ಯೆಗೆ ಶರಣಾಗಿರುವುದು ಆಘಾತಕಾರಿ ಸುದ್ದಿ. ಇನ್ನೂ ಆಘಾತದ ವಿಷಯ ಅಂದರೆ ಶೇ.37.8 ರಷ್ಟು ಪ್ರಕರಣಗಳು 30ಕ್ಕಿಂತಲೂ ಕಡಿಮೆ ವಯೋಮಾನವದವರು. ನಿರುದ್ಯೋಗವೂ ಇದಕ್ಕೆ ಒಂದು ಮುಖ್ಯ ಕಾರಣ ಹೌದಾದರೂ ಜೀವನ ಗೆಲ್ಲುವ ಮನೋಭಾವದ ಕೊರತೆಯೂ ಅಷ್ಟೇ ಸತ್ಯ.

ಇಂತಹ ದುರ್ಘಟನೆಗಳನ್ನು ಕಡಿಮೆ ಮಾಡಲು ಜೀವನದಲ್ಲಿ ಜೀವನ್ಮುಖಿ ಆದರ್ಶಗಳ ಪಾತ್ರ ಅತಿ ಮುಖ್ಯವಾದವು. ಇಂತಹ ಆದರ್ಶಗಳು ನಮ್ಮ ಜೀವನದ ಅಡಿಪಾಯವನ್ನು ಗಟ್ಟಿಗೊಳಿಸುತ್ತವೆ. ಬದುಕನ್ನು ಎಂಥದೇ ಕಷ್ಟಗಳ ಸಂದರ್ಭದಲ್ಲಿ ಜೈಸಲು ಕಾರಣವಾಗುತ್ತವೆ. ಆದರ್ಶಗಳು ಅಂದರೆ ಎಂತಹ ವಿಷಯಗಳು ಮತ್ತು ನಂಬಿಕೆಗಳು ಆದರ್ಶವಾಗಬೇಕು ಎಂಬುದು ಅತಿ ಮುಖ್ಯವಾಗಬೇಕು. ಸಮಾಜದ ಬಗ್ಗೆ ಕಳಕಳಿ, ಬಡವರಪರ ಕಾಳಜಿ, ಗ್ರಾಮಭಾರತದ ಕಡೆ ಆಕರ್ಷಣೆ, ಸರಳ ವಿವಾಹ, ಅಂತರಜಾತಿಯ ವಿವಾಹ ವಿಧವಾ ವಿವಾಹ, ಸರಳ ಜೀವನಶೈಲಿ, ಪರೋಪಕಾರ ಇತ್ಯಾದಿ ವಿಷಯಗಳು ಹರೆಯಕ್ಕೆ ಕಾಲಿಡುವ ಹೊತ್ತಲ್ಲಿ ಸಹಜವಾಗಿಯೇ ನಮಗೆ ಆದರ್ಶಗಳಾಗಬೇಕು. ಅಂದುಕೊಂಡಂತೆ ಬದುಕಲು ಯಾಕೆ ಸಾಧ್ಯವಿಲ್ಲ ಎಂಬ ಸವಾಲು ಹಾಕಬೇಕಿರುವ ವಯಸ್ಸು ಸಹ ಇದೇ.

ರಾಜಾರಾಮ್ ಮೋಹನರಾಯ್‌ರಂಥವರು ಸತಿ ಸಹಗಮನ ಪದ್ಧತಿ, ಬಾಲ್ಯವಿವಾಹ ಗಳಂತಹ ಸಾಮಾಜಿಕ ಪಿಡುಗುಗಳ ವಿರುದ್ಧ ಸೆಟೆದೆದ್ದು ಅವುಗಳನ್ನು ತೊಲಗಿಸಲು ಹೋರಾಡಿದರು. ಉತ್ತರ ಕರ್ನಾಟಕದ ಜೀವಾಳವಾದ ಶರಣ ಸಂಸ್ಕೃತಿ ಚಳುವಳಿ ಯುಗದ ಉಗಮ ಕಾಲ 12ನೇ ಶತಮಾನ. ಕಾಯಕಜೀವಿ ಗಳೆಲ್ಲ ಒಂದಾಗಿ ಲಿಂಗ, ಜಾತಿ, ವರ್ಗ, ವರ್ಣ ತಾರತಮ್ಯವನ್ನು ತೊಡೆಯಲು ಹುಟ್ಟಿಕೊಂಡಂತಹ ಚಳುವಳಿ ಇದು. ಸಮಾನತೆಯತ್ತ ಗುರಿಯಿಟ್ಟು ಇಂತಹ ತಾರತಮ್ಯದ ವಿರುದ್ದ ಹೋರಾಡಿದರು. ಅವರು ನುಡಿಯಲ್ಲಿ ಎಚ್ಚರವಿದ್ದು ನಡೆಯಲ್ಲಿ ಮರೆತರೆ ಹಿಡಿದಿರ್ಪ ಲಿಂಗ ಘಟಸರ್ಪ ನೋಡಾ ಎಂದು ನಂಬಿದವರು. ಆದ್ದರಿಂದಲೇ ಕಲಾವತಿ ಮತ್ತು ಶೀಲವಂತರ ಅಂತರಜಾತಿಯ ವಿವಾಹವು ನಡೆಯಿತು. ಇದಕ್ಕೆ ಅವರಿಬ್ಬರ ಪೋಷಕರ ಸಮ್ಮತಿಯೂ ದೊರಕಿತ್ತು. ಪ್ರಾಮಾಣಿಕ ಮತ್ತು ಸರಳ ಜೀವನ ನಡೆಸುವುದು ಅವರ ಆದರ್ಶ ವಾಗಿತ್ತು. ಇವೆಲ್ಲವೂ ಚಳುವಳಿಗೆ ಮೂಲ ಶಕ್ತಿ ಯಾಗುತ್ತವೆ. ಅಂದರೆ ಯಾವುದೇ ರೀತಿಯ ಚಳುವಳಿಗಳು ಜೀವನ್ಮುಖಿಯಾದಂತಹ ಇಂಥ ಆದರ್ಶಗಳನ್ನು ಕಟ್ಟಿಕೊಡುತ್ತವೆ. ಮತ್ತು ಸಮಾಜಕ್ಕೂ ವ್ಯಕ್ತಿಗೂ ಸಂಬಂಧ ಜೋಡಿಸುತ್ತವೆ. ಚಳುವಳಿಗಳ ಮೂಲಕ ಸಮಾಜದ ಮಧ್ಯೆ ನಿಜವಾದ ಭಾರತದ ನಿರ್ಮಾಣಕ್ಕಾಗಿ ಸಮಯ ವನ್ನು ಹಾಕಿದರೆ ಸಮಾಜಪರ ಇರಬೇಕಾದ ನಮ್ಮ ಜವಾಬ್ದಾರಿಯ ಅರಿವಾಗುತ್ತದೆ. ಹಾಗೂ ಜೀವನದ ಬಗ್ಗೆ ಪ್ರೀತಿ ಬೆಳೆಯುತ್ತದೆ.

ಚಳುವಳಿಗಳು ಕೇವಲ ಆರ್ಥಿಕ ಪ್ರಶ್ನೆಗಳನ್ನೆತ್ತಿ ಕೊಂಡು ನಡೆದರೆ ಇಂಥ ಆದರ್ಶಗಳು ಪೂರ್ತಿ ಮೈಗೂಡುವುದಿಲ್ಲ. ಬಹುಶಃ ಈ ಕಾರಣದಿಂದಲೂ ಈಗಿನ ಯುವಜನತೆ ಮೇಲಿನ ಆದರ್ಶಗಳನ್ನು ಪ್ರಮುಖವೆಂದು ಪರಿಗಣಿಸಲಾಗುತ್ತಿಲ್ಲ. ಆದರೆ ಅನೇಕ ಚಳುವಳಿಗಳಲ್ಲಿ ತೊಡಗಿಸಿಕೊಂಡ ಯುವಜನತೆ ಆದರ್ಶದ ಜೀವನ ನಡೆಸುತ್ತಿರುವ ಅನೇಕ ಉದಾಹರಣೆಗಳು ಸಿಗುತ್ತವೆ. ಅಂಥವರು ಸಮಾಜಕ್ಕೂ ಕೊಡುಗೆ ಕೊಟ್ಟಿರುವರು. ಇಂದಿನ ದಿನಗಳಲ್ಲಿ ಇತಿಹಾಸವನ್ನು ಯುವಜನತೆ ಮರೆಯುತ್ತಿದೆ. ಮಾಧ್ಯಮಗಳೂ ಸಹ ಟೊಳ್ಳು ಪ್ರತಿಷ್ಠೆಯನ್ನು ತುಂಬುತ್ತಿವೆ. ಶ್ರಮರಹಿತ ಕೆಲಸ,



ಐಷಾರಾಮಿ ಜೀವನ ಜನಸಮೂಹದಿಂದ ಆಚೆ ಜೀವಿಸುವ ವೈಖರಿ ಹೆಚ್ಚಾಗುತ್ತಿದೆ. ಈ ಭಾವನೆ ಬೆಳೆಸಲಾಗುತ್ತಿದೆ. ಮಧ್ಯಮವರ್ಗದ ಯುವಜನರಲ್ಲಿ ಈ ಭಾವನೆ ಬೆಳೆಯುತ್ತಿದೆ ಕೂಡ. ಜಗತ್ತಿನಲ್ಲಿನ ಮುಂದುವರಿದ ಎಲ್ಲ ತಂತ್ರಜ್ಞಾನಗಳನ್ನು ಅರಿತು, ವೃತ್ತಿಪರ ಕೋರ್ಸಗಳನ್ನು ಮಾಡಿ, ಉನ್ನತ ಹುದ್ದೆಯ ಕುರ್ಚಿಯ ಮೇಲೆ ಕೂತು ಐದಂಕಿ ಸಂಬಳ ಪಡೆದವರು ಸಹ ಮದುವೆಯ ವಿಷಯಕ್ಕೆ ಬಂದಾಗ ನಮ್ಮ ಯುವಕರದ್ದು ಅದೇ ಹಳೇ ಪುರಾಣ ಅದೇ ಹಳೇ ರಾಗ. ಗುಣ ರೂಪದ ಜೊತೆಗೆ ಅವನಷ್ಟೆ ಓದಿದ ಹುಡುಗಿಯಿದ್ದರೂ ವರದಕ್ಷಿಣೆ ಬೇಕು ಅನ್ನುತ್ತಾರೆ. ಇದೇ ಹೊತ್ತಿನಲ್ಲಿ ಅನೇಕ ಯುವತಿಯರು ಸಹ ಉನ್ನತ ಓದು ಪಡೆಯುತ್ತಿದ್ದಾರೆ. ಆದರೆ ಓದಿನ ನಂತರ ಕೆಲಸಕ್ಕೆ ಹೆಜ್ಜೆ ಹಾಕುವವರು ಕಡಿಮೆ. ಇದು ದೇಶದಲ್ಲಿ ಪುರುಷಪ್ರಧಾನ ವ್ಯವಸ್ಥೆ ಇದೆ ಅನ್ನುವುದಕ್ಕೆ ಸಂಕೇತ. ಇಷ್ಟೆಲ್ಲ ಕಲಿತು, ಕೆಲಸ ಮಾಡಿ ಹಣ ಗಳಿಸ್ತಾ ಇದ್ದಾರೆ ಅನ್ನುವುದು ಎಷ್ಟು ಸತ್ಯವೋ ಆಯ್ಕೆಯ ಹಕ್ಕನ್ನು ಕಳೆದುಕೊಳ್ತಾ ಇದ್ದಾರೆ ಅನ್ನುವುದು ಅಷ್ಟೇ ಸತ್ಯ. ಇವರ ಜೀವನವೆಲ್ಲ ಹೊರಗೆಲ್ಲ ಝುಗಝುಗ ಒಳಗೆಲ್ಲ ಭಗ ಭಗ ಅನ್ನುವ ಹಾಗಿದೆ.

### ಯುವಜನತೆ ನಾಡಿನ ಸಂಪತ್ತು

ಇಷ್ಟೆಲ್ಲ ಓದಿಯೂ ಸಹ ವರದಕ್ಷಿಣೆರಹಿತ ಮದುವೆ ಆಗ್ತಾ ಇಲ್ಲ ಅನ್ನುವುದು ದುರಂತದ ಸಂಗತಿ. ದುರಾಸೆ ಹೆಚ್ಚಾಗ್ತಾ ಇದೆ. ಎಷ್ಟೆ ಸಂಪತ್ತಿದ್ದರೂ ಇನ್ನೂ ಬೇಕು ಎನ್ನುವವರೇ ಹೆಚ್ಚು. ಈ ದುರಾಸೆ ಇದ್ದವರು ವಿಧವೆಯರನ್ನು ಮದುವೆ ಆಗ್ತಾರೆಯೇ? ಇಲ್ಲ...! ಅಂತರಜಾತಿ ವಿವಾಹದ ದಿಕ್ಕಿನತ್ತ ಮುಖವೂ ಸಹ ಮಾಡುವುದಿಲ್ಲ. ಹಿರಿಯರ ನೆಪ ಹೇಳಿ, ಸಂಸ್ಕೃತಿಯ ನೆಪ ಹೇಳಿ ತಪ್ಪಿಸಿಕೊಳ್ಳುತ್ತಾರೆ. ಆಯ್ಕೆಯ ಹಕ್ಕಿನಿಂದ ದೂರ ಓಡಿ ಹೋಗುತ್ತಾರೆ. ಯುವಕರು ದಿಟ್ಟ ಹೆಜ್ಜೆ ಇಟ್ಟರೆ ಏನನ್ನೂ ಸಹ ಮಾಡಬಹುದು. ಇಂದಿನ ದಿನಗಳಲ್ಲಿ ಒಂಟಿಮಹಿಳೆಯರು, ವಿಧವೆಯರು ಎದುರಿಸುತ್ತಿರುವ ಸಮಸ್ಯೆಗಳು ಅಷ್ಟಿಷ್ಟಲ್ಲ. ಇಂತಹ ಮಹಿಳೆಯರಿಗೆ ರಕ್ಷಣೆ ದೊಡ್ಡ ಸವಾಲಾಗಿದೆ. ಬೆಂಗಳೂರಿನಲ್ಲಿ ಇತ್ತೀಚೆಗೆ ಒಂಟಿ ಮಹಿಳೆಯರ ಕೊಲೆಗಳು ಹೆಚ್ಚಾಗುತ್ತಿವೆ. ಕೆಲಸದ ಸ್ಥಳದಲ್ಲಿನ ಕಾಮುಕ ಕಣ್ಣುಗಳಿಂದ ಬಚಾಯಿಸಿಕೊಂಡು ಕೆಲಸ ಮಾಡುವುದು ದೊಡ್ಡ ಸವಾಲೇ ಆಗುತ್ತಿದೆ.

ವಿಧವೆಯರು ತಮ್ಮ ಆಸ್ತಿತ್ವಕ್ಕಾಗಿ ದಿನನಿತ್ಯ ಹೋರಾಡ್ತಾ ಇದ್ದಾರೆ. ಯುವಜನರಿಗೆ ಪುನ:ವಿವಾಹದ ಬಗ್ಗೆ ಹಿಂಜರಿಕೆಯೇಕೆ? ಅಪವಾದ ಎಂಬಂತೆ ಅಲ್ಲೊಂದು ಇಲ್ಲೊಂದು ವಿಧವಾ, ಪುನರ್ ವಿವಾಹ ನಡೆಯುತ್ತಿವೆ. ಈ ದಿಕ್ಕಿನತ್ತ ಹೆಜ್ಜೆ ಹಾಕಿ ಹೊಸ ಇತಿಹಾಸ ಬರೆದವರು ಕ್ಯೂಬಾದ ಯುವಕರು. ಕ್ಯೂಬಾದಲ್ಲಿ ವಸಾಹತುಶಾಹಿಗಳಿಂದಾಗಿ ವೇಶ್ಯಾವಾಟಿಕೆ ಬೆಳೆದು ನಿಂತಿತ್ತು. ಕ್ಯೂಬಾ ಕ್ರಾಂತಿಯು ಅಲ್ಲಿ ಹೊಸ ಬದಲಾವಣೆ ಗಾಳಿ ಬೀಸಿತು. ಅಲ್ಲಿನ ಯುವಕರು ವೇಶ್ಯಾವಾಟಿಕೆಯನ್ನ ತಡೆಯಲು, ನಿರ್ನಾಮ ಮಾಡಲು ವೇಶ್ಯೆಯರನ್ನು ಮದುವೆಯಾದರು. ಕ್ಯೂಬಾ ಯುವಕರ ನಿರ್ಣಯ ನಮಗೆಲ್ಲ ಆದರ್ಶವಾಗಬೇಕು. ಇಲ್ಲಿನ ಯುವಕರ ಮನದಲ್ಲಿ ಯಾಕೆ ಆದರ್ಶಗಳ ಸಸಿ ಚಿಗುರೊಡೆಯಬಾರದು? ಯುವಜನರಲ್ಲಿ ಅಸ್ಥಿರತೆ ಹೆಚ್ಚಾಗ್ತಾ ಇದೆ. ನಿರುದ್ಯೋಗ ಹೆಚ್ಚಾಗ್ತಾ ಇದೆ. ಇದೇ ಸಂದರ್ಭದಲ್ಲಿ ಯುವಕರನ್ನು ಕೋಮುಭಾವನೆಯತ್ತ ಸೆಳೆಯಲಾಗ್ತಾ ಇದೆ. ಇಂತಹ ಯುವಜನರಲ್ಲಿ ವಿಚ್ಛಿದ್ರಕಾರಿ, ಉದ್ರೇಕಕಾರಿ ಅಂಶಗಳನ್ನು ತಲೆಯಲ್ಲಿ ಮನಸಲ್ಲಿ ತುಂಬಲಾಗ್ತಾ ಇದೆ. ಇಂತಹ ಯುವಜನತೆ ತಮ್ಮ ಜಾತಿ, ಧರ್ಮ, ಅಂತಸ್ತನ್ನು ಪ್ರೀತಿಸುತ್ತಾರೆ. ಕೋಮುಭಾವನೆಯತ್ತ ಆರ್ಕಸಲ್ಪಡುವ ಯುವಕರು ಪರಧರ್ಮ ದ್ವೇಷಿಗಳಾಗಿ ಮಾರ್ಪಾಡಾಗುತ್ತಿದ್ದಾರೆ. ಇದಕ್ಕೆ ಉದಾಹರಣೆಗಳಂತೆ ಅನೇಕ ಸಂಗತಿಗಳನ್ನು ನೋಡಬಹುದು. ಮರೆಯಲಾಗದಂತಹ ಸಂಗತಿಗಳಲ್ಲಿ ಗುಜರಾತನ ಗೋದ್ರಾ ಹತ್ಯಾಕಾಂಡ ಒಂದು. ಕೋಮು ಹೆಸರಿನಲ್ಲಿ ನಡೆದ ಇದಕ್ಕಿಂತ ಕ್ರೂರವಾದ ಘಟನೆಯಿಲ್ಲ. ಅನೈತಿಕ, ಕ್ರಿಮಿನಲ್ ರಾಜಕಾರಣ, ಅನಾರೋಗ್ಯಕರ ರಾಜಕೀಯ ಏರಿಳಿತಗಳು ಯುವಕರ ಮೇಲೆ ಪರಿಣಾಮ ಬೀರುತ್ತಿವೆ. ಯುವಕರನ್ನು ಕರಪ್ಟ್ ಮಾಡುತ್ತಿವೆ. ಇದರಿಂದಾಗಿ ನಿರುದ್ಯೋಗಿ ಯುವಜನತೆ, ಸಾಮಾನ್ಯ ಬಡನತದಲ್ಲಿರುವ ಕೆಳವರ್ಗದ ಯುವಜನತೆ ತಮ್ಮ ಭವಿಷ್ಯದ ಬಗ್ಗೆ ಸ್ಪಷ್ಟತೆ ಕಾಣದೆ ನಿಷ್ಕ್ರಿಯ ಮತ್ತು ನಿರಾಶಾ ಜೀವನದತ್ತ ತಳ್ಳಲ್ಪಡುತ್ತಿದ್ದಾರೆ. ಇಂತಹ ಜೀವನದಿಂದ ಹೊರಬಂದು, ಬರುವ ಸಮಸ್ಯೆಗಳನ್ನು ಸವಾಲುಗಳನ್ನು ಎದುರಿಸಿ ಇತಿಹಾಸ ರಚಿಸುವತ್ತ ಮುನ್ನಡೆಯಲು ಯುವಜನತೆ ಮುಂದಡಿ ಇಡಬೇಕಿದೆ. ಝಗಮಗಿಸುವ ಸೂರ್ಯನ ಜೊತೆ ಇದ್ದರೆ ಸಾಲದು ಬೆಳದಿಂಗಳ ಚಂದ್ರನ ಜೊತೆಗೂ ಬದುಕಬೇಕು. ಹೊಸ ಬದುಕಿನತ್ತ ಹೆಜ್ಜೆ ಹಾಕುವ ಆದರ್ಶಗಳು ನಮ್ಮವಾಗಲಿ.... ❑





## ವ್ಯವಸ್ಥೆ

ಸಮಾಜ ರಚಿಸಿದ ವ್ಯವಸ್ಥೆ
ಅಧಿಕಾರಶಾಹಿ, ಪುರುಷಶಾಹಿ,
ವರ್ಗ, ಜಾತಿ, ಲಿಂಗ ತಾರತಮ್ಯದಿಂದ
ಕೆಳಗೆ ತುಳಿದು ಮೇಲೆ ಹತ್ತುವ ವ್ಯವಸ್ಥೆ

ಸಮಾನತೆಯ ತತ್ವ ಸಾರಿ
ಅಸಮಾನತೆಯ ದಾರಿ ಹಿಡಿಯುವ ವ್ಯವಸ್ಥೆ
ಒಬ್ಬರ ಮನೆಗೆ ಕಿಚ್ಚು ಹಚ್ಚಿ
ಮತ್ತೊಬ್ಬರ ಮನೆಗೆ ದೀಪ ಬೆಳಗಿಸುವ ವ್ಯವಸ್ಥೆ

ಕಿತ್ತು ತಿನ್ನುವ ಬಡತನದಲ್ಲಿ ಬದುಕುವ ವ್ಯವಸ್ಥೆ
ಅಟ್ಟಹಾಸದಲ್ಲಿ ಮೆರೆವ ಶ್ರೀಮಂತರ ವ್ಯವಸ್ಥೆ
ಮನಸಲ್ಲೊಂದು ಮಾತಲ್ಲೊಂದು ಚಿಂಚಿಸುವ ವ್ಯವಸ್ಥೆ
ತಮ್ಮ ತಮ್ಮ ಸ್ವಾರ್ಥಕ್ಕೆ ಬಳಸುವ ವ್ಯವಸ್ಥೆ

ಗುರಿ ಹೊಂದಿದ್ದರು, ಗುರಿ ಇಲ್ಲದ ವ್ಯವಸ್ಥೆ
ಕಣ್ಣಿದ್ದರು, ಕುರುಡಾಗಿರುವ ವ್ಯವಸ್ಥೆ
ಉಸಿರಿದ್ದರೂ, ಜೀವವಿಲ್ಲದ ವ್ಯವಸ್ಥೆ
ಸಮಾಜ ರಚಿಸಿದ ವ್ಯವಸ್ಥೆ
ಅಧಿಕಾರಶಾಹಿ, ಪುರುಷಶಾಹಿ

■ *ಶ್ರೀದೇವಿ.ಎಲ್*



# ಹುಕ್ಕಾ ಪ್ರಕರಣ; ಜಾರಿಕೊಳ್ಳುವ ಜಾಣರು

■ ಜಾನ್ಹವಿ ಎ.

*ಅನು: ಸಮುದ್ಯತಾ ಕಂಜರ್ಪಣೆ*

ಸುಮಾರು ಒಂದು ವರ್ಷದ ಹಿಂದೆ, ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ಮಾಡುವುದನ್ನು, ಹುಕ್ಕಾ ಸೇದುವುದನ್ನು ಸರ್ಕಾರ ನಿಷೇಧಿಸಿತ್ತು. ಆದರೂ ಕೆಲವು ಹುಕ್ಕಾ ಪಾರ್ಲರ್‌ನ ಮಾಲೀಕರು ಧೈರ್ಯವಾಗಿ ಕಾನೂನಿಗೆ ಸೆಡ್ಡು ಹೊಡೆದು ಮುಂಬಾಗಿಲಿನಿಂದ, ಇನ್ನಷ್ಟು ಮಾಲೀಕರು ಹಿಂಬಾಗಿಲಿನಿಂದ ತಮ್ಮ ವೃತ್ತಿಯನ್ನು ಮುಂದುವರೆಸಿದ್ದರು. ಇಂತಹ ಸಮಯದಲ್ಲಿ ಇತ್ತೀಚೆಗೆ ರೆಸಿಡೆನ್ಸಿ ರಸ್ತೆಯಲ್ಲಿರುವ ಸೆವೆನ್ ಹಿಲ್ಸ್ ಪಾರ್ಲರ್‌ನ ಮೇಲೆ ದಾಳಿ ನಡೆಯಿತು. ಈ ಧಾಳಿಯ ಕುರಿತಾದ ಲೇಖನವೊಂದು ಹಾಸ್ಯಾಸ್ಪದ ಎನಿಸಬಹುದು; ಆದರೆ ಅಲ್ಲಿ ಮುಟ್ಟುಗೋಲು ಹಾಕಿಕೊಂಡ ವಸ್ತುಗಳಿಗಿಂತ ಆಘಾತಕಾರಿಯಾಗಿದ್ದ ವಿಷಯವೇನೆಂದರೆ, ಅಲ್ಲಿ ಹುಕ್ಕಾ ಸೇದುತ್ತಿದ್ದ ಬಹುಪಾಲು ಜನರಲ್ಲಿ ಪ್ರೌಢಶಾಲೆಯ ಗಂಡು-ಹೆಣ್ಣು ಮಕ್ಕಳು ಇದ್ದದ್ದು.

ಈ ಸುದ್ದಿಯಲ್ಲಿ ನಿರ್ಲಕ್ಷಿಸಲಾಗದಂತಹ ಹಲವಾರು ಸೂಕ್ಷ್ಮ ದೃಷ್ಟಿಕೋನಗಳನ್ನು ಕಾಣಬಹುದಾಗಿದೆ. ನಾವು ಇಲ್ಲಿ ಯಾರನ್ನು ತಾನೇ ತಪ್ಪಿತಸ್ಥರೆನ್ನಲು ಸಾಧ್ಯ? ಗಿರಾಕಿಗಳ ವಯಸ್ಸನ್ನು ಗಮನಿಸದೆ ಹುಕ್ಕಾ ಸೇವನೆಗೆ ಅವಕಾಶ ನೀಡಿದ ಪಾರ್ಲರ್‌ನ ಮಾಲೀಕರನ್ನೇ? ಮಕ್ಕಳ ಬೆಳವಣಿಗೆಯನ್ನು ಗಂಭೀರವಾಗಿ ಪರಿಗಣಿಸದ ಪೋಷಕರು ಹಾಗೂ ಶಿಕ್ಷಣಸಂಸ್ಥೆಗಳನ್ನೇ? ಅರ್ಥವೇ ಇಲ್ಲದ ಆಸೆಯ ಚಟಕ್ಕೇ ಮಾರುಹೋಗಿ ಭವಿಷ್ಯವನ್ನೇ ಬಲಿಕೊಡುತ್ತಿರುವ ಯುವ ಜನಾಂಗವನ್ನೇ? ಅಥವಾ ಬೇಜಾಬ್ದಾರಿಯಿಂದ ವರ್ತಿಸುತ್ತಿರುವ ಸಮಾಜವನ್ನೇ? ಈ ಆರೋಪದ ಆಟ ಎಂದೂ ಕೊನೆಗಾಣಲಾರದು.

ಈ ರೀತಿಯ ಹಲವಾರು ಅಕ್ರಮ ಚಟುವಟಿಕೆಗಳ ಕುರಿತಾದ ಸುದ್ದಿಗಳನ್ನು ಪ್ರತಿನಿತ್ಯ ನಾವು ಓದುತ್ತಿದ್ದರೂ, ಈ ಸುದ್ದಿ ನಮ್ಮನ್ನು ದಂಗುಬಡಿಸಿದೆ. ಇದು ಸಹಜ, ಯಾಕೆಂದರೆ ಸಮಾಜದ ಅಭಿವೃದ್ಧಿಯ ಹೆಸರಿನಲ್ಲಿ ಯುವಜನರ ಬದುಕಿನ ಮೌಲ್ಯಗಳು ಶಿಥಿಲಗೊಳ್ಳುತ್ತಿರುವುದು ಅರಿವಿಗೆ ಬರುತ್ತಿದೆ. ಶಾಲಾ ಆಡಳಿತಾಧಿಕಾರಿಯವರು ತಮ್ಮ ಶಾಲೆಯ ವಿದ್ಯಾರ್ಥಿಗಳು ಸಮವಸ್ತ್ರ ಅಥವಾ ಗುರುತಿನ ಚೀಟಿ ಧರಿಸಿದ್ದಾಗ, ಅಕ್ರಮ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡುಬಂದರೆ ಮಾತ್ರ ಅವರನ್ನು ತಮ್ಮ ಸಂಸ್ಥೆಯಿಂದ ಅಮಾನತುಗೊಳಿಸಲಾಗುವುದು ಎಂಬ ಪತ್ರಿಕ್ರಿಯೆಯನ್ನು ನೀಡಿವೆ. ನಿರಾಶೆಯುಂಟು ಮಾಡುವ ಸಂಗತಿಯೆಂದರೆ, ಬಹಳಷ್ಟು ವಿದ್ಯಾಸಂಸ್ಥೆಗಳು ಮಕ್ಕಳ ಸಮಗ್ರ ಅಭಿವೃದ್ಧಿಯನ್ನು ಪರಿಗಣಿಸದೇ, ಕೇವಲಸಂಸ್ಥೆಗೆ ಒಳ್ಳೆ ಹೆಸರು ತರುವ/ಹಣಗಳಿಸುವುದರ ಬಗ್ಗೆ ಮಾತ್ರ ಗಮನ ಹರಿಸುತ್ತಿರುವುದು. ಈ ದುಷ್ಚಟಗಳಿಗೆ ದಾಸರಾಗುತ್ತಿರುವ ಮಕ್ಕಳ ಮನಃಸ್ಥಿತಿ-ಪರಿಸ್ಥಿತಿಗಳ ಬಗ್ಗೆ ಎಳ್ಳಷ್ಟೂ ತಲೆಕೆಡಿಸಿಕೊಳ್ಳದೆ ಇರುವ ವಿದ್ಯಾಸಂಸ್ಥೆಗಳು ಮತ್ತು ಪೋಷಕರು ಈ ಪರಿಸ್ಥಿತಿಗೆ ನಾವು ಜವಾಬ್ದಾರರಲ್ಲ ಎಂದೂ ಒಬ್ಬರನ್ನೊಬ್ಬರು ದೂಷಿಸುತ್ತಿರುವುದು ನಿಜಕ್ಕೂ ಶೋಚನೀಯ ಸಂಗತಿ.

ಈ ಘಟನೆಯ ಪರಿಣಾಮಗಳೇನು? ಅಕ್ರಮ ವಸ್ತುಗಳ ಜಪ್ತಿಯ ಸಂಖ್ಯೆ ಹೆಚ್ಚಾಗಿದೆಯೇ? ಪೋಷಕರು ತಮ್ಮ ಮಕ್ಕಳ ಬೆಳವಣಿಗೆಯನ್ನು ಗಂಭೀರವಾಗಿ ಪರಿಗಣಿಸಿದ್ದಾರೆಯೇ? ಸಂಸ್ಥೆಗಳು ತಮ್ಮ ಸಂಸ್ಥೆಯ ಖ್ಯಾತಿಯ ಚಿಂತೆ ಬಿಟ್ಟು ಪ್ರತಿಯೊಬ್ಬ ವಿದ್ಯಾರ್ಥಿಯ ಸಮಗ್ರ ಬೆಳವಣಿಗೆಯ ಕುರಿತಾಗಿ ಗಮನಹರಿಸಿವೆಯೇ? ಸರಕಾರ ಯುವಜನರ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಈ ರೀತಿಯ ವಸ್ತುಗಳನ್ನು ಮಾರಾಟ ಮಾಡುತ್ತಿರುವ ಮಾಲೀಕರ ಲೈಸನ್ಸ್‌ನ ರದ್ದು ಮತ್ತು ಜುಲ್ಮಾನೆಯನ್ನು ವಿಧಿಸುತ್ತಿದೆಯೇ? ಖಂಡಿತ ಇಲ್ಲ.

ದುರದೃಷ್ಟವಶಾತ್ ಈ ವಿಷವರ್ತುಲದಲ್ಲಿ ಯುವಜನತೆ ಸಿಕ್ಕಿ ಹಾಕಿಕೊಂಡಿದ್ದೇವೆ. ಒಂದೆಡೆ ಸರ್ಕಾರವೇ ಸಾರ್ವಜನಿಕವಾಗಿ ಗುಟಖಾ, ತಂಬಾಕು. ಹೊಗೆಸೊಪ್ಪು, ಹುಕ್ಕಾ. ಹೆಂಡ, ಸಾರಾಯಿ ಡ್ರಗ್ಸ್‌ಗಳ ಜೊತೆಗೆ ಹೊಸ ಮಾದರಿಮಾದಕ ವಸ್ತುಗಳನ್ನು, ಆಕರ್ಷಕ ಜಾಹೀರಾತುಗಳನ್ನು ಮಾಧ್ಯಮದಲ್ಲಿ ಬಿತ್ತರಿಸಿ ಅದರ ಬಗ್ಗೆ ಕುತೂಹಲ ಮೂಡಿಸಿ ಅದನ್ನು ಬಳಸುವಂತೆ ಯುವಜನರನ್ನು ಪ್ರೇರೆಪಿಸಲಾಗುತ್ತಿದೆ. ಏಕೆಂದರೆ, ಈ ರೀತಿಯ ಚಟಗಳು ಶ್ರೀಮಂತ ವರ್ಗ-ಪೋಷಿತ ಸರಕಾರಕ್ಕೆ ದುಡ್ಡು ಮಾಡುವ ಯಂತ್ರವಾಗುವುದಲ್ಲದೆ, ಯುವಜನರನ್ನು ವಾಸ್ತವ ಪರಿಸ್ಥಿತಿಯ ನ್ಯೂನ್ಯತೆ ಮತ್ತು ಅಸಮಾನತೆಗಳ ವಿರುದ್ಧ ಧ್ವನಿಯೆತ್ತದಂತೆ ತಡೆದು, ಯುವಜನರನ್ನು ನಿಷ್ಪ್ರಯೋಜಕರಂತೆ ಮಾಡುವ ಒಂದು ತಂತ್ರವೂ ಇದಾಗಿದೆ.

ಇಂದಿನ ಶಾಲಾ-ಕಾಲೇಜುಗಳು ಇದಕ್ಕೆ ಹೊರತೇನಲ್ಲ. ಶಾಲಾ-ಕಾಲೇಜಿನ ಅಥವ ಆಳುವ ಶ್ರೀಮಂತ ವರ್ಗದ ಪರವಾದ ವ್ಯವಸ್ಥೆಯು ಯುವಜನರ ಮಾನಸಿಕ ನೆಮ್ಮದಿ ಮತ್ತು ಆರೋಗ್ಯದ ಸಮಸ್ಯೆಯ ಬಗ್ಗೆ ಕಿಂಚಿತ್ತು ಯೋಚಿಸಿಲ್ಲ. ಈ ವ್ಯವಸ್ಥೆಯು ಶಿಕ್ಷಣವನ್ನೇ ಗುಲಾಮನನ್ನಾಗಿಸಿಕೊಂಡು, ಮಾರುಕಟ್ಟೆಯನ್ನಾಗಿಸಿ ಯುವಜನರ ಭವಿಷ್ಯದಲ್ಲಿ ಆಟವಾಡುತ್ತಿವೆ. ಇಂತಹ ನೀಚ ಕೃತ್ಯಗಳನ್ನು ಪ್ರೋತ್ಸಾಹಿಸಿ ಕೊಂಡು ಬಂದ ಈ ಹಾಳು ವ್ಯವಸ್ಥೆಯಲ್ಲಿ ಹುಕ್ಕಾ ಎಂಬ ಮೋಜಿನ ಪೆಡಂಭೂತವು ಎಲ್ಲಾ ಕಡೆ ಸರ್ವೇಸಾಮಾನ್ಯವಾಗಿ ಬೆಳೆದು ಬರುತ್ತಿದೆ. ಇಲ್ಲಿ ತಪ್ಪು ಯಾರದು? ನಾವು ಎಡವುತ್ತಿರುವುದೆಲ್ಲಿ? ಎಂಬುದನ್ನು ಕೂಲಂಕುಷವಾಗಿ ಪೋಷಕರು, ವಿದ್ಯಾಸಂಸ್ಥೆಯು/ಸರ್ಕಾರವು ಯೋಚಿಸಬೇಕಿದೆ. ಸಮಾಜದ ಚಟಗಳಿಗೆ/ಮಾದಕ ವಸ್ತುಗಳಿಗೆ ಬಲಿ ಯಾಗುತ್ತಿರುವ ಯುವಜನರ ಮನಃಸ್ಥಿತಿ-ಪರಿಸ್ಥಿತಿಯನ್ನು ಅರಿಯುವ ಪ್ರಯತ್ನವನ್ನು ಮಾಡುವುದನ್ನು ಬಿಟ್ಟು, ಈ ಸಮಸ್ಯೆಯನ್ನು ಕಾನೂನು-ಪಾಲನ ಸಮಸ್ಯೆಯೆಂದು ತಿಳಿದು ಪೋಲಿಸ್ ವ್ಯವಸ್ಥೆಗೆ ಬಿಡಲಾಗದು. ಇದೇ ವ್ಯವಸ್ಥೆಯ ಪೂರ್ವಾಗ್ರಹಗಳಿಂದ ಪೀಡಿತ ವಾಗಿರುವ ಪೊಲೀಸ್-ಕೋರ್ಟು ಈ ಸಮಸ್ಯೆಗೆ ಪರಿಹಾರ ಕಾಣಿಸದು. ಸಮಾಜದಲ್ಲಿ ಏಳುಬೀಳುಗಳನ್ನು ಅಸಮಾನತೆಯನ್ನು ಶಾಶ್ವತವಾಗಿ ಮುಂದು ವರೆಸುತ್ತಿರುವ ಈ ಶ್ರೀಮಂತ ವರ್ಗದ ಹಿತಾಸಕ್ತಿಗಳನ್ನು ಕಾಪಾಡುತ್ತ ಲಿರುವ ಆರ್ಥಿಕ, ಸಾಮಾಜಿಕ ವ್ಯವಸ್ಥೆಯನ್ನು ಬುಡಮೇಲಾಗಿಸಿ, ಒಂದು ಸೌಹಾರ್ದಯುತ-ಆರೋಗ್ಯವಂತ ಸಮಾಜದ ಆಸ್ತಿತ್ವಕ್ಕೆ ವಿದ್ಯಾರ್ಥಿನಿ/ ವಿದ್ಯಾರ್ಥಿ ಸಮುದಾಯ ಧ್ವನಿಯೆತ್ತಬೇಕಿದೆ. ❑



# ಬದುಕಿನ ಗಾಡಿ ನೂಕುವ ಬೀಡಿ

■ ಜ್ಯೋತಿ ಚೆಲ್ಲಾರ್

ಹೊಸತನ ಜೀವಂತಿಕೆಯ ಲಕ್ಷಣವೆನಿಸಿಕೊಂಡರೆ ಬದಲಾವಣೆ ಪ್ರಗತಿಯ ಲಕ್ಷಣ ಎನ್ನುವುದು ಬಲ್ಲವರ ಮಾತು 'ಉದ್ಯೋಗಂ ಪುರುಷ ಲಕ್ಷಣಂ' ಎಂದು ಜಗಜ್ಜಾಹೀರಾಗಿ ಘಂಟಾಘೋಷರಾಗಿ ಕೂಗಿ ಬಿಡುವ ಈ ಸಂದರ್ಭದಲ್ಲೂ ಈ ಮಾತು ತರ್ಕಕ್ಕೆ ಒಡ್ಡುತ್ತದೆ. ಕ್ರಿ.ಶ. 19ನೇಯ ಶತಮಾನದಲ್ಲಿ ಮಂಗಳೂರಿಗೆ ಕಾಲಿರಿಸಿದ ಬಾಸೆಲ್ ಮಿಷನರಿ ಸಂಸ್ಥೆ ತುಳುನಾಡಿನ ಉದ್ದಗಲಕ್ಕೂ ಜನಪರವಾದ ಕೆಲಸಗಳನ್ನು ಹುಟ್ಟು ಹಾಕಿ ಕಾರ್ಯರೂಪಕ್ಕೆ ತಂದದ್ದಲ್ಲದೆ ದಾಖಲೀಕರಣಗೊಳಿಸಿತು. ಅದರ ಪರಿಣಾಮವಾಗಿ ಹುಟ್ಟಿಕೊಂಡ ಸ್ಥಿತ್ಯಂತರಗಳೊಂದಿಗೆ ಕಾಲಿರಿಸಿದ ಆಧುನಿಕ ಶಿಕ್ಷಣ ಬದಲಾವಣೆಯ ಹೊಸ ಅಲೆಯನ್ನು ನಿರ್ಮಾಣ ಮಾಡಿತು. ನಿಧಾನವಾಗಿ ಸದ್ದಿಲ್ಲದೆ ನಡೆದ ಮತಾಂತರದಿಂದಾಗಿ ಜಾತಿವ್ಯವಸ್ಥೆಯ ಒಳಗಿನ ಬಹಳ ಮಂದಿ ಜಾತಿ ಬಹಿಷ್ಕಾರಕ್ಕೆ ಒಳಗಾದರು. ಪರಸ್ಪರರಲ್ಲಿ ಕೊಡುಕೊಳ್ಳುವಿಕೆ ನಿಂತುಹೋದಾಗ ಅಂತಹ ಮಂದಿಯ ಬದುಕಿನ ನಿರ್ವಹಣೆಗಾಗಿ ಸಣ್ಣ ಪುಟ್ಟ ಕಾರ್ಖಾನೆಗಳನ್ನು ಮಿಶನರಿಗಳೆ ಸ್ಥಾಪಿಸಿದರು. ಹಂಚಿನ ಕಾರ್ಖಾನೆ ಮತ್ತು ಬನಿಯನ್ ಕಾರ್ಖಾನೆಗಳಾಗಿ ಮೊದಲ ಬಾರಿಗೆ ದುಡಿಯಲಾರಂಭಿಸಿದ ಮಂದಿಗೆ ಹೊರಗಿನ ದುಡಿಮೆ ಎನ್ನುವುದು ಲಭ್ಯವಾಯಿತು. ಗಂಡು, ಹೆಣ್ಣು ಎನ್ನುವ ವ್ಯತ್ಯಾಸವಿಲ್ಲದೆ ದುಡಿಯಲು ಹೊರಟ ಮಂದಿಗೆ ಜೀವನೋಪಾಯ ಗಳಿಸಿಕೊಳ್ಳಲು ಸಾಧ್ಯವಾಯಿತು. ಕೃಷಿ ಕೆಲಸವಲ್ಲದೆ ಬೇರೆ ಉದ್ಯೋಗದಿಂದಲೂ ಬದುಕಬಹುದು ಎನ್ನುವ ಹೊಸ ದಿಕ್ಕು ಗೋಚರಿಸಿತು. ಕರಾವಳಿಯ ಮಂದಿ ಹೊಸತನಕ್ಕೆ ಬಹಳ ಬೇಗ ತೊಡಗಿಸಿಕೊಳ್ಳುವವರಾದ ಹಿನ್ನೆಲೆಯಲ್ಲಿ ಪರಂಪರೆಯ ಕುಲಕಸುಬುಗಳನ್ನು ಪಕ್ಕಕ್ಕೆ ಸರಿಸಿ ಕೃಷಿಯೇತರ ಕೆಲಸದತ್ತ ಸಾಗಲು ಕಾರಣವಾಯಿತು.

ಕರ್ನಾಟಕದ ಉದ್ದಗಲಕ್ಕೂ ಗಮನಹರಿಸಿದರೆ ಉಳಿದ ಪ್ರದೇಶದ ಮಹಿಳೆಯರಿಗಿಂತ ಭಿನ್ನವಾಗಿ ಕೃಷಿ ಹೊರತು ಪಡಿಸಿ 'ಬೀಡಿ' ಎಂಬ ಒಂದು ಕಸುಬು ಉದ್ದಿಮೆಯಾಗಿ ಹುಟ್ಟಿಕೊಂಡದ್ದೇ ಇಲ್ಲಿ. ತಂಬಾಕು ಸೇವನೆ ಚಟವಾಗಿ ಬೆಳೆದು ಬೀಡಿ ಕಟ್ಟುವ ಕೆಲಸ ಒಂದು ಬೃಹತ್ ಉದ್ಯಮವಾಗಿ ಬೆಳೆದು ಲಕ್ಷಾಂತರ ಜನರ ಬದುಕಿಗೆ ದಿಕ್ಕಾಯಿತು. ಬೀಡಿ ಉದ್ಯಮ ಮಂಗಳೂರಿಗೆ ಕಾಲಿಟ್ಟದ್ದು ಪುತ್ತು ವೈಕುಂಠ ಶೇಠ್ ಆರಂಭಿಸಿದ ಬೀಡಿ ಕಂಪನಿಯೊಂದಿಗೆ, 19ನೇ ಶತಮಾನದ ಕೊನೆಗೆ. ಗಣೇಶ್ ಬೀಡಿ, ಪ್ರಕಾಶ್ ಬೀಡಿ, ಭಾರತ್ ಬೀಡಿ, ಸಾದು ಬೀಡಿ... ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಬೀಡಿ ಕಟ್ಟಲು ಕಡು ಗುಲಾಬಿ, ಹಳದಿ, ಬಿಳಿ, ಕಪ್ಪು ಬಣ್ಣದ ನೂಲುಗಳನ್ನು ಬಳಸುತ್ತಾರೆ. ಬೀಡಿ ತಿರುಚಿ ಕಟ್ಟುವ ವಿನ್ಯಾಸದಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಬೀಡಿ ಬ್ರ್ಯಾಂಡ್ ಬೇರೆಯಾಗುತ್ತದೆ.

ಯಾವಾಗ ಬೀಡಿ ಉದ್ದಿಮೆ ಹಳ್ಳಿಗಳಿಗೆ ಕಾಲಿಟ್ಟಿತೋ ಹಳ್ಳಿಯ ಚಿತ್ರಣವೇ ಬದಲಾಯಿತು. ಬೀಡಿ ಕಂಪೆನಿಯು ಬೀಡಿಕಟ್ಟುವುದಕ್ಕೆ ಸಾವಿರಕ್ಕೆ ಇಂತಿಷ್ಟು ಎಂದು ಬೆಲೆ ನಿಗದಿ ಮಾಡಿತು. ಕಟ್ಟುವ ಕೆಲಸಕ್ಕೆ ಸಿಕ್ಕಿದ್ದು ಹೆಂಗಸರು ಹಾಗೂ ಮಕ್ಕಳು. ಅವರು ಕಟ್ಟಿದ ಬೀಡಿಯನ್ನು ಹತ್ತಿರದಲ್ಲೇ ಇರುವ ಬೀಡಿ ಬ್ರಾಂಚ್‌ಗೆ ನಿತ್ಯವೂ ಕೊಡಬೇಕು. ಕಟ್ಟಿದ್ದರಲ್ಲಿ ಲೋಪದೋಷ ಕಂಡು ಬಂದರೆ, ಬೀಡಿ ಕಟ್ಟಿಸುವಾತ ಅವೆಲ್ಲವನ್ನು ಮುರಿದು ಬಿಸಾಡುತ್ತಾನೆ. ದಿನದ ಶ್ರಮವೆಲ್ಲ ವ್ಯರ್ಥ, ಹಾಗಾಗದಿರ ಬೇಕಾದರೆ ಬಹಳ ತಾಳ್ಮೆಯಿಂದ ಸರಿಯಾಗಿ ಬೀಡಿ ಕಟ್ಟಬೇಕು, ಎಲೆ ಕಪ್ಪಾಗಬಾರದು, ಹೊಗೆಸೊಪ್ಪು ಸರಿ ಹಾಕಬೇಕು, ಬೂಸ್ಟ್ ಬರಬಾರದು. ಈ ಎಲ್ಲವೂ ಸುಗಮಗೊಂಡರೆ ಕಟ್ಟಿದ್ದಕ್ಕೆ ಮಂಜೂರಿ ಲಭ್ಯ!

ಬೀಡಿ ಕಟ್ಟುವ ಕೆಲಸದಿಂದ ಮೇಲ್ಜಾತಿಯ, ಮೇಲ್ವರ್ಗದ ಮಹಿಳೆಯರು ದೂರವೇ ಉಳಿದರು. ಅರೆ ಹೊಟ್ಟೆ ಉಂಡವರು, ಹಸಿವಿನಿಂದ ಕಂಗೆಟ್ಟವರಿಗೆ ಅದೊಂದು ವರದಾನವೇ ಆಯಿತು. ಏನಿಲ್ಲದಿದ್ದರೂ ಮನೆಯ 'ಉಪ್ಪುಮುಂಚಿ'ಯ ಖರ್ಚು ಬೀಡಿಯಿಂದಲೇ ಹೋಗುತ್ತಿತ್ತು. ಬೀಡಿ ಉದ್ಯಮ ಆರಂಭವಾಗುವ ಕಾಲಕ್ಕೆ ಸಾವಿರಕ್ಕೆ ರೂ. 1.50 ಇದ್ದುದು ಈಗ ರೂ. 115 ತನಕ ಲಭಿಸುತ್ತಿದೆ. ಉದ್ದಿಮೆಗಳು ಕಾರ್ಮಿಕ ಕಾನೂನನ್ನು ಅಳವಡಿಸಿಕೊಳ್ಳದೇ ಇದ್ದಾಗ ಕಾರ್ಮಿಕ ಸಂಘಟನೆಗಳು ಸಂಘಟಿತರಾಗಿ ಕಾರ್ಮಿಕರಿಗೆ ಸವಲತ್ತು

ದೊರಕಿಸಿಕೊಟ್ಟರೂ ಇವತ್ತು ರಜಾ ಸಂಬಳ, ಬೋನಸ್ ಎನ್ನುವ ಆರ್ಥಿಕ ಸೌಲಭ್ಯಗಳಲ್ಲದೆ, ಹೆರಿಗೆ ಭತ್ಯೆ, ವೈದ್ಯಕೀಯ ಭತ್ಯೆ, ಪಿಂಚಣಿ ಸೌಲಭ್ಯವು ದೊರಕುತ್ತಿದೆ...

ಒಪ್ಪತ್ತು ಊಟಕ್ಕೂ ತೊಂದರೆ ಇದ್ದ ಮನೆಗಳಿಗೆ ಸಾಂತ್ವಾನ ಹೇಳಿದೆ ಬೀಡಿ ಉದ್ಯಮ. ಮಗಳ ಮದುವೆ, ಮನೆ ನಿರ್ಮಾಣ ದಂತಹ ಕೆಲಸಗಳು ಸಹಾ ನಿರಾತಂಕವಾಗಿ ನೆರವೇರಿತು. ಅಕ್ಷರ ವಂಚಿತರು ಸ್ವಾಭಿಮಾನದಿಂದ ಬಾಳಿ ಬದುಕಲು ಉನ್ನತ ವ್ಯಾಸಂಗ ಪಡೆಯಲು, ಸಹಕಾರಿಯಾಯಿತು. ವಾರದ ಕೊನೆಯ ಶನಿವಾರ ಸಿಗುವ ಮಜೂರಿಯಿಂದಲೇ ಪಾತ್ರೆ, ಬಟ್ಟೆ, ಮನೆ ಸಾಮಾಗ್ರಿ, ಉಳಿತಾಯದ ಕಂತು ಕಟ್ಟುತ್ತಲೇ ಬದುಕಿನ ಕಂತು ಪೂರೈಸಿದವರು ಬಹಳ ಮಂದಿ. ಬಣ್ಣ ಬಣ್ಣದ ಬೀಡಿಯ ನೂಲಿನಂತೆ ಬೀಡಿ ಕಟ್ಟಿದ್ದರಿಂದಲೇ ಬದುಕಿನ ರಂಗು ತುಂಬಿಕೊಂಡವರು ಹಲವರು. ಮೊದಲು ಒಂದು 'ಕೈ'ಯಲ್ಲಿದ್ದ ಬೀಡಿ ಎರಡು ನಾಲ್ಕುಗಳಾಗಿ ಸಾವಿರ ಸಾವಿರ ಸಂಖ್ಯೆ ಕೈಗಳಾಗಿ ಕೊನೆಗೆ ಅಧಿಕೃತ ಪಾಸ್ ಬುಕ್‌ಗಳಾಗಿ ಗುರುತುಹತ್ತಿ ಬೆಳೆಯಿತು. ಬೆದುರು ಮಾರ್, ಪೊಲುವೈ ಗದ್ದೆಯ ಕಟ್ಟ ಹುಣಿಯಲ್ಲಿ ಒಂದು ಕಾಲಕ್ಕೆ ಕೃಷಿ ಕೆಲಸದ ಮಹಿಳೆಯರ ದಂಡು ಸಾಗುತ್ತಿದ್ದರೆ ಕಾಲ ಬದಲಾದಂತೆ ಬೀಡಿಯ ಕಟ್ಟು ತಿರುಗಿಸುತ್ತಾ, ಸಾಗುವ ಹೆಣ್ಣು ಮಕ್ಕಳ ದಂಡು ಗದ್ದೆಯ ಹುಣಿಗೆ ವೈಯಾರನೀಡಿತು. ಬೀಡಿ ಬ್ರಾಂಚಿನಲ್ಲಿ ಊರ ಸುದ್ದಿಗಳು ಗುಸುಗುಸು ಪಿಸು ಪಿಸುವಿನಲ್ಲಿ ಚರ್ಚೆಯಾಗುತ್ತಿತ್ತು. ಎಳೆಯ ಹುಡುಗಿಯರು ಬ್ರಾಂಚಿನತ್ತ ಸಾಗಿದರೆ ಊರಿನ ಪಡ್ಡೆ ಹುಡುಗರು ಸುಮ್ಮನೆ ಕುಳಿತದ್ದಿದೆಯೇ? ಬ್ರಾಂಚಿನ ಬದಿಯ ಹೋಟೆಲ್, ಅಂಗಡಿಗಳು ಜನಜಂಗುಳಿಂದ ತುಂಬಿರುತ್ತಿತ್ತು. ಕೆಲವು ಕುಟುಂಬಗಳಲ್ಲಿ ಯುವತಿಯರು ಬೀಡಿ ಕಟ್ಟಿದರು ತರುವವರು ಮಾತ್ರ ಮಕ್ಕಳೇ. ಗದ್ದೆಯಲ್ಲಿ ದುಡಿಯುವ ಬಡ ಹೆಣ್ಣು ಮಕ್ಕಳೂ ಕೃಷಿ ಕಸುಬಿಗೆ ಬೆನ್ನು ತಿರುಗಿಸಿದರು. ಮನೆ ವಾರ್ತೆಯ ಕೆಲಸಗಳನ್ನು ಮಾಡುತ್ತಾ ವಿರಾಮದ ವೇಳೆಯಲ್ಲಿ ಸಮಯ ಹೊಂದಿಸಿ ಬೀಡಿ ಕಟ್ಟುವ ಕೆಲಸ ಹೆಚ್ಚು ಸುಸೂತ್ರವೆನಿಸಿತು. ಅಮ್ಮನ ಬೀಡಿಯ 'ಸೂಪ್'ನೊಂದಿಗೆ ಆಟ ವಾಡುತ್ತಲೇ ಬೆಳೆದ ಮಕ್ಕಳು ಬೀಡಿ ಕಟ್ಟುವ ಕೆಲಸವನ್ನು ಆಟದಂತೆಯೆ ಕಲಿತರು. ಅಕ್ಷರ ವಂಚಿತರಿಗೆ ಅಕ್ಷರ ಜ್ಞಾನ ಪಡೆಯಲು ಬೀದಿ ಉದ್ಯಮವೊಂದು ಕೈ ಸೇತುವೆಯಾಯಿತು. ಕುಲಕಸುಬು ಮಾಡುವ ಮನೆಗಳಲ್ಲೂ ಬೀಡಿ ಕಟ್ಟುವ ಕೆಲಸ ಆರಂಭವಾಯಿತು. ಹೆಣೆದ ಚಾಪೆ, ಬುಟ್ಟಿ ಬೆವೆರಿಳಿಸಿ ಮಾಡಿದ ಮಡಕೆಯನ್ನು ಮಾರಾಟಮಾಡಲು ಮನೆ ಮನೆಗೆ ಹೊತ್ತು ಸಾಗಬೇಕು. ಇದು ಹಾಗಲ್ಲ, ಸುರುಳಿ ಸುತ್ತಿ ಕಟ್ಟಿ ನಿಗದಿತ ಸಮಯದೊಳಗೆ ಅಂಗಡಿಯಲ್ಲಿ ಕೊಟ್ಟು, ಬಿಟ್ಟರಾಯಿತು. ಮಾರುಕಟ್ಟೆಯ ಜವಾಬ್ದಾರಿ ಇಲ್ಲದ ಈ ಶ್ರಮ ಅನುಕೂಲಕರವಾಯಿತು.

ಮನೆಯ ಹೊಸ್ತಿಲು ದಾಟಬಾರದೆನ್ನುವ ನಿಷೇಧಕ್ಕೆ ಪ್ರತಿಕ್ರಿಯೆಯಾಗಿ ಬೀಡಿ ಬ್ರಾಂಚಿನೆಡೆಗೆ ಸಾಗಿ ಬಂದ ಹದಿಹರೆಯದ ಹೆಣ್ಣು ಮಕ್ಕಳು ಒಂದೆಡೆ ಬದುಕು ಕಟ್ಟಲು ಅವಕಾಶವಾಯಿತು. ಇನ್ನೊಂದೆಡೆ ಉಳ್ಳವರ ದರ್ಪ ದಾಷ್ಟ್ಯಗಳು ಅವರ ಗದ್ದೆಗಳ ದುಡಿಮೆಯ ನಿರಾಕರಣೆಗೆ ಕಾರಣವಾಯಿತು. ಇವೆರೆಡರ ವೈರುಧ್ಯದಲ್ಲಿ ಕಲಿತ, ಕಲಿಯದ ಎಲ್ಲಾ ಹೆಣ್ಣು ಮಕ್ಕಳಿಗೂ ಬದುಕಿನ ದಾರಿ ನೂಕಲು ಬೀಡಿ ಒಂದು ಮಾಧ್ಯಮವಾಯಿತು.

ಬದುಕಿನ ಗಾಡಿ ನೂಕಲು ಕಟ್ಟುವ ಬೀಡಿಯ ಕಸುಬಿನ ಯಾತನೆಯು ನೂರಾರು. ಬೀಡಿಯ ಎಲೆ, ಹೊಗೆಸೊಪ್ಪು, ನೂಲನ್ನು ಬೀಡಿ ಕಟ್ಟಿಸುವ ಬ್ರಾಂಚಿನ ಮಾಲೀಕನಿಂದ ಸಂಗ್ರಹಿಸಬೇಕು. ಇದಕ್ಕಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಒಂದೂರಿನಿಂದ ಇನ್ನೊಂದೂರಿನವರೆಗೆ ಕಾಲ್ನಡಿಗೆಯಲ್ಲೋ, ಬಸ್ಸಿದ್ದರೆ ಬಸ್ಸಲ್ಲೋ ಸಾಗಬೇಕು. ನಿಗದಿತ ಸಮಯಕ್ಕೆ ಹೋಗಬೇಕಾದುದರಿಂದ ಎಡತಾಕುವ ಮನೆವಾರ್ತೆಯ ಕೆಲಸಗಳು ಒಂದೆಡೆಯಾದರೆ, ಇನ್ನೊಂದೆಡೆ ದಾರಿಯ ಪ್ರಯಾಣದುದ್ದಕ್ಕೂ ಇರುವ ಬೇಹುಗಾರಿಕೆಯ ಸವಾಲುಗಳು, ಅಪಾಯದ ಕರೆಗಂಟೆಗಳೂ ಇವೆ. ಸಮಯ ಪ್ರಜ್ಞೆಯಿಂದ ಹಿಂಬಾಲಿಸಿ ಬೇಟೆಯಾಡುವವರ ಮಧ್ಯೆ ಸುರಕ್ಷಿತವಾಗಿ ಸಾಗಬೇಕು.

ಬೀಡಿ ಬ್ರಾಂಚಿನ ಯಜಮಾನನಿಗೋ ಒಂದೇ 'ಕೈ'ಯ ಬೀಡಿಯಲ್ಲ. ನೂರಾರು 'ಕೈ'ಗಳ ಬೀಡಿ ಕಟ್ಟುವ ನೂರಾರು ಮಹಿಳೆಯರು ಇರುತ್ತಾರೆ. ತಾನು ಮನೆಯಲ್ಲಿ ಕಟ್ಟಿ, ಕಟ್ಟು ತಿರುಗಿಸಿ ಅಚ್ಚುಕಟ್ಟಾಗಿ ಜೋಡಿಸಿ ತಂದ ಬೀಡಿಯನ್ನು ಆತನ ಮೇಜಿನ ಮುಂದಿನ ಬುಟ್ಟಿಗೋ, ಗೆರಸೆಗೋ ಸುರಿಯಬೇಕು. ಹಗಲು ರಾತ್ರಿ ನಿದ್ದೆ ಕೆಟ್ಟು ಬೆನ್ನು ಬಾಗಿಸಿ ಕಟ್ಟಿ ತಂದ ಬೀಡಿಯನ್ನು ಆತ ತಕ್ಷಣಕ್ಕೆ ಒಪ್ಪಿಕೊಳ್ಳುವುದಿಲ್ಲ. ಸೇರಿರುವ ನೂರಾರು ಮಂದಿಯ ಮಧ್ಯೆ ಆತನ ಮಾತಿನ ವರಸೆ, ಮರ್ಜಿಯನ್ನೇ ಕಾಯಬೇಕು. ಹೆಚ್ಚಿನವರು ಹೆಣ್ಣುಮಕ್ಕಳಾದರೂ ಅವರಲ್ಲಿ ಬಹಳ ಮಂದಿ ಯುವತಿಯರು, ಮಧ್ಯವಯಸ್ಕರು, ಮಕ್ಕಳು, ಅಜ್ಜಿಯಂದಿರು ಇರುತ್ತಾರೆ. ಕಟ್ಟಿದ ಬೀಡಿ ಸರಿಯಿಲ್ಲವೆಂದು ಯಜಮಾನ ದೂರುವಾಗ ಆತನ ಕುಹಕದ ಮಾತುಗಳನ್ನು ಕೇಳಿಸಿಕೊಳ್ಳಲೇಬೇಕಾದ ಅನಿವಾರ್ಯತೆ ಇರುತ್ತದೆ. ಸಾಮಾನ್ಯವಾಗಿ ಪುರುಷರೇ ಬೀಡಿ ಕಟ್ಟಿಸುವವರಾಗಿದ್ದು, ಲಂಪಟತನದಿಂದ ವರ್ತಿಸುವವರಿಗೂ ಕಡಿಮೆಯಿಲ್ಲ. ಮೈ, ಕೈ ಮುಟ್ಟುವುದರೊಂದಿಗೆ ನಮಗೆ ದಕ್ಕಿಯಾರೇ ಎಂಬ ತೀಕ್ಷ್ಣನೋಟವೂ ಅಲ್ಲಿರುತ್ತದೆ. ಅವನೊಂದಿಗೆ ಆತನ ಎಲ್ಲ ಪ್ರಶ್ನೆಗಳಿಗೂ ಸಹನೆಯಿಂದ ಪ್ರತಿಕ್ರಿಯಿಸಬೇಕು. ಕುತಂತ್ರಕ್ಕೆ ಬಲಿಬೀಳದಂತೆ ಎಚ್ಚರವಿರಬೇಕು. ಒರಟಾಗಿ ಧಿಕ್ಕರಿಸಿದರೆ ಅವರು ಶೋಷಿಸುವ ಪರಿ ಬಹಳ ಸೂಕ್ಷ್ಮ ಕಟ್ಟಿದ ಬೀಡಿಗಳು ಸರಿಯಿಲ್ಲ ಎಂದು ಅದರ ಸೊಂಟವನ್ನೇ ಮುರಿದು ಮುಖಕ್ಕೆ ಎಸೆಯುತ್ತಾರೆ. ಎಲೆ, ಹೊಗೆಸೊಪ್ಪು ಕೊಡುವಾಗಂತೂ ಕೆಟ್ಟ ಎಲೆ, ಕಡಿಮೆ ಪ್ರಮಾಣದ ಹೊಗೆಸೊಪ್ಪು ಕೊಡುತ್ತಾರೆ. ಇಷ್ಟು ಎಲೆ, ಇಷ್ಟು ಹೊಗೆಸೊಪ್ಪಿಗೆ ಇಷ್ಟು ಬೀಡಿ ಆಗಬೇಕು ಎಂಬ ಲೆಕ್ಕಾಚಾರ ಇದೆ. ಹಾಗೆ ಆಗದಿದ್ದರೆ ಮತ್ತೆ ಬೀಡಿ ಕಟ್ಟಿದ್ದಕ್ಕೆ ಕೊಡುವ ಮಜೂರಿಯಿಂದಲೇ ಹಣವನ್ನು ಕಡಿತಗೊಳಿಸಲಾಗುತ್ತದೆ. ಹಾಗಾಗಿ ಬೀಡಿಕಟ್ಟಿಸುವಾತನ ಮರ್ಜಿ ಕಾಯುವುದು ಅನಿವಾರ್ಯವಾಗುತ್ತದೆ. ಕೆಲವೊಮ್ಮೆ ಎಷ್ಟು ತಗ್ಗಿ – ಬಗ್ಗಿ, ಮೌನಕ್ಕೆ ಶರಣಾದರೂ ಬೀಡಿ ತೆಗೆಯುವಾಗ ಅದರಲ್ಲಿ ಹೊಗೆಸೊಪ್ಪು ಇಲ್ಲವೆಂದೋ ಸುತ್ತಿದ ಸುರುಳಿ ಸರಿಯಾಗಲಿಲ್ಲ, ಹಾಕಿದ ನೂಲಿನ ರೀತಿ ಸರಿಯಿಲ್ಲ ಎಂದು ತಿರಸ್ಕರಿಸುತ್ತಾರೆ. ಮಾಡಿದ ಶ್ರಮವೆಲ್ಲ ನೀರ ಮೇಲಣ ಹೋಮವಾಗುತ್ತದೆ.

ಸಾಕಷ್ಟು ಶ್ರಮ, ತಾಳ್ಮೆ ಮತ್ತು ಶ್ರದ್ಧೆಯನ್ನು ಬೀಡಿ ಕಾಯಕ ಬಯಸುತ್ತದೆ. ಬ್ರಾಂಚಿನಿಂದ ತಂದ ಕಚ್ಚಾ ಪದಾರ್ಥಗಳಾದ ನೂಲು, ಎಲೆ, ಹೊಗೆಸೊಪ್ಪನ್ನು ಮಿತವಾಗಿ ಹಿತವಾಗಿ ಬಳಸಬೇಕು. ತಂದ ಎಲೆಯ ಗಚ್ಚುಗಳನ್ನು ಒಣದಾಗಿ ಇಲ್ಲವೇ

*(21ನೇ ಪುಟಕ್ಕೆ)*



# ರಾಷ್ಟ್ರೀಯ ಉದ್ಯೋಗ ಖಾತರಿ



■ ಶಾರದಾ ಗೋಪಾಲ

ಮಹಿಳೆಯರ ಸಬಲೀಕರಣ ಎನ್ನುವುದು ಇತ್ತೀಚಿನ ವರ್ಷಗಳಲ್ಲಿ ಬಹಳವಾಗಿ ಕೇಳಿಬರುತ್ತಿರುವ ಒಂದು ಶಬ್ದಗುಚ್ಛ. ಸ್ತ್ರೀ ಪುರುಷರ ನಡುವಿನ ಅಸಮಾನತೆಯನ್ನು ತೊಡೆದು ಹಾಕುವುದರ ಸಲುವಾಗಿ ಮಹಿಳೆಯರನ್ನು ಸಶಕ್ತರನ್ನಾಗಿ ಮಾಡುತ್ತೇವೆ ಎಂದು ಸರಕಾರ ಘೋಷಿಸುತ್ತದೆ. ಅದೆಷ್ಟೋ ಸಂಘ ಸಂಸ್ಥೆಗಳು ಈ ನಿಟ್ಟಿನಲ್ಲಿ ದುಡಿಯುತ್ತವೆ. ಮಹಿಳಾ ಗುಂಪುಗಳನ್ನು ಮಾಡುವುದು, ಅವರಿಗೆ ಹತ್ತಾರು ರೀತಿಯ ತರಬೇತಿಗಳನ್ನು ಕೊಡುವುದು, ಆರ್ಥಿಕ ಸಬಲೀಕರಣಕ್ಕಾಗಿ ಬೇರೆ ಬೇರೆ ಉದ್ಯೋಗಗಳಲ್ಲಿ ಅವರನ್ನು ತೊಡಗಿಸುವುದು ಹೀಗೆ ಹಲವು ಪಯತ್ನಗಳು ನಡೆದಿವೆ.

ಸಬಲೀಕರಣದ ವಿಷಯ ಬಂದಾಗ ಅದೇಕೋ ಒಂದೇ ಮಹಿಳೆಯನ್ನು ಗುರುತಿಸುವುದೂ ಇಲ್ಲ, ಅವಳ ಬಗ್ಗೆ ಮಾತಾಡುವುದೂ ಇಲ್ಲ. ಯಾವಾಗಲೂ ಅದು ಮಹಿಳಾ ಗುಂಪಾಗಿರಬೇಕು. ಸರಕಾರ ಗುರುತಿಸುವುದೂ ಮಹಿಳೆಯರ ಒಂದು ಗುಂಪನ್ನೇ, ಬ್ಯಾಂಕುಗಳು ಗುರುತಿಸುವುದೂ ಒಂದು ಗುಂಪನ್ನೇ. ಸರಕಾರ ಅಥವಾ ಸಂಘ ಸಂಸ್ಥೆಗಳು ಮಾಡಿದ ಸ್ತ್ರೀ ಶಕ್ತಿ, ಸ್ವಸಹಾಯ ಸಂಘಗಳಿಗೆ ಬ್ಯಾಂಕು ಸಾಲಗಳನ್ನು ಕೊಡುತ್ತದೆಯೇ ಹೊರತು ನೇರವಾಗಿ ಮಹಿಳೆಯೊಬ್ಬಳಿಗೆ ಸಾಲವನ್ನು ಕೊಡುವುದಿಲ್ಲ. ಇದೀಗ ನರೇಗಾದಲ್ಲಿ ಪ್ರಪ್ರಥಮ ಬಾರಿಗೆ ಮಹಿಳೆಯೊಬ್ಬಳಿಗೆ ನೇರವಾಗಿ ಅವಳ ಬ್ಯಾಂಕ್ ಖಾತೆಗೇ ಹಣವು ಹೋಗುವಂತೆ ಕಾಯಿದೆಯು ಅನುವು ಮಾಡಿಕೊಟ್ಟಿದೆ.

ಆದರೆ ಪುರುಷ ಪ್ರಧಾನ ವ್ಯವಸ್ಥೆಯಿದು. ಹೆಣ್ಣನ್ನು ತೊತ್ತಾಗಿ ಸ್ವೀಕರಿಸಿರುವ ಸಮಾಜವಿದು. ಹೆಣ್ಣಿಗೆ ನೇರವಾಗಿ ಅವಳ ಖಾತೆಗೇ ಹಣ ಹೋಗುವಂತೆ ಮಾಡುತ್ತೇನೆ ಎನ್ನುವ ಸರಕಾರದ ವಿಚಾರವನ್ನದು ಸುಲಭವಾಗಿ ಆಗಗೊಟ್ಟೀತೇ? ಹೆಣ್ಣಿನ ಪರವಾಗಿಯೇ ನೂರೆಂಟು ಕಾಯಿದೆಗಳು ಬಂದರೂ ಹೆಣ್ಣನ್ನು ಅವಳ ಬಂಧನದಿಂದ ಬಿಡುಗಡೆ ಮಾಡೆವು ಎನ್ನುತ್ತಿರುವ ವ್ಯವಸ್ಥೆ, ಹೆಣ್ಣನ್ನು ನೇರವಾಗಿ ಸಂಬೋಧಿಸದ ನರೇಗಾದಂಥ ಒಂದು ಕಾಯಿದೆಗೆ ಕಿವುಡುಕಾಸಿನ ಬೆಲೆ ಕೊಟ್ಟೀತೇ? ಒಬ್ಬರು ಹೆಚ್ಚಿನವರು ಇನ್ನೊಬ್ಬರು ಕಡಿಮೆಯವರು ಎನ್ನುವ ಈ ವಮೌಲ್ಯ ಕೆಳಗಿರುವವರನ್ನು ಮೇಲಕ್ಕೆತ್ತುವ ಪ್ರತಿಯೊಂದು ಪ್ರಯತ್ನದಲ್ಲಿಯೂ ಭಂಗ ತರಲು ಸದಾ ಸಿದ್ದವಾಗಿಯೇ ಇರುತ್ತವೆ.

ಒಬ್ಬ ಸ್ತ್ರೀಗೆ ಕೇವಲ ಆರ್ಥಿಕ ಸಬಲೀಕರಣವಷ್ಟೇ ಅಲ್ಲ, ವ್ಯಕ್ತಿಗತವಾಗಿ ಸಿಗಬೇಕಾದ ಸ್ಥಾನಮಾನ, ಅವಕಾಶಗಳು ಪುರುಷನಿಗೆ ಸಮಾನವಾಗಿ ಸಿಗಬೇಕೆಂದು ಹಂಬಲಿಸುವವರದ್ದು ನಿಲ್ಲದ ಹೋರಾಟ. ಅದು ಪುರುಷ ಪ್ರಧಾನ ಮೌಲ್ಯದ ವಿರುದ್ಧ ಹೋರಾಟ. ಅದಕ್ಕಾಗಿ ಹೋರಾಡುವವರು ಸಿಗುವ ಪ್ರತಿಯೊಂದು ಯೋಜನೆ, ಹಕ್ಕನ್ನೂ ಮಹಿಳೆಯರ ಹಕ್ಕನ್ನು ಖಾತರಿಪಡಿಸಲಿಕ್ಕಾಗಿಯೇ ಬಳಸುತ್ತಾರೆ. ಖಾನಾಪುರ ತಾಲೂಕಿನ ಹನ್ನೆರಡು ಪಂಚಾಯತಿಗಳಲ್ಲಿ ಕೆಲಸ ಮಾಡುತ್ತಿರುವ ಜಾಗೃತಿ ಸಂಸ್ಥೆಗೆ ಕೂಡ ಬೆಳಗಾವ್ ಜಿಲ್ಲೆಯ ನರೇಗಾ ಜಾರಿಯಲ್ಲಿ ಬಂದಾಗ ಕಂಡಿದ್ದು ಮಹಿಳಾ ಸಶಕ್ತೀಕರಣಕ್ಕಾಗಿ ಒಂದು ಹೊಸ ಅಸ್ತ್ರ. ಹಾಗೆಯೇ ಆ ಕೆಲಸದ ಹಾದಿಯಲ್ಲಿ ಬಂದ ಎಡರು ತೊಡರುಗಳೂ ಹತ್ತು ಹಲವಾರು. 'ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಮತ್ತು ಮಹಿಳೆಯರ ಸಬಲೀಕರಣ' ವಿಚಾರದಲ್ಲಿ ಬಂದಿರುವ ಎಡರು ತೊಡರುಗಳನ್ನು ಮೆಟ್ಟಿನಿಲ್ಲಲು ಮಹಿಳೆಯರು ಮಾಡಿದ ಸಾಹಸಗಳನ್ನು ಹಂಚಿಕೊಳ್ಳುವ ಪ್ರಯತ್ನವಿದಾಗಿದೆ.

ಅಧಿಕಾರಶಾಹಿ, ರಾಜಕೀಯ, ಗುತ್ತಿಗೆದಾರ ಮತ್ತು ಊರ ಹಿರಿಯರು ಎಲ್ಲರೂ ಪುರುಷ ಪ್ರಧಾನ ವ್ಯವಸ್ಥೆಯನ್ನು ಬಲವಾಗಿ ನಂಬಿರುವಂಥವರು. ಅಂಥವರಿಗೆ ಉದ್ಯೋಗ ಖಾತರಿಯು ಒಂದು ಜೀರ್ಣಿಸಿಕೊಳ್ಳಲಾಗದ ಕಾಯಿದೆ. ಹಾಗಾಗಿ ಕಾನೂನು ಅದರ ನಿಜ ಅರ್ಥದಲ್ಲಿ ಜಾರಿ ಆಗದಂತೆ ಸಕಲ ಪ್ರಯತ್ನಗಳು. ಉದ್ಯೋಗ ಖಾತರಿಯ ಕಾರ್ಯಕ್ರಮಗಳು ನಿರ್ಧಾರವಾಗುವ ಗ್ರಾಮ ಸಭೆಯಲ್ಲಿ ಅವಳಿಗೆ ಪ್ರವೇಶದ ನಿರಾಕರಣೆ.

ನಿರ್ಧಾರ ಮಾಡುವಲ್ಲೆಲ್ಲ ಅವಳಿಗೆ ಸ್ಥಾನವಿಲ್ಲ ಎಂಬ ಧೋರಣೆ. ಗ್ರಾಮದ ಹಿರಿಯರು, ಊರ ಗೌಡರು ಮಾಡುವ ಕಾನೂನುಗಳು, ಅವುಗಳನ್ನು ಮಹಿಳೆಯರಂತೂ ಮೀರುವಂತೆಯೇ ಇಲ್ಲ. ಮಾಹಿತಿ ಇಲ್ಲದ ಹಳ್ಳಿ ಹೆಣ್ಣುಮಕ್ಕಳ ಮುಗ್ಧತೆಯ ಮೇಲೆ ಅಧಿಕಾರಶಾಹಿಯ ಸವಾರಿ, ಮುಗ್ಧತೆಯ ದುರುಪಯೋಗ, ಕಡೆಯಲ್ಲಿ ಆ ಮನಸ್ಸುಗಳಿಗೂ ವಂಚನೆಯನ್ನು ಕಲಿಸುವ ಭ್ರಷ್ಟ ವ್ಯವಸ್ಥೆ. ಇವೆಲ್ಲ ಅಡ್ಡಿ ಆತಂಕಗಳನ್ನೂ ಮೀರಿ ನಿಲ್ಲುವ ಮಹಿಳಾ ಸಂಘಟಿತ ಪ್ರಯತ್ನಗಳು ನಡೆದಿವೆ.

**ಉದ್ಯೋಗ ಖಾತರಿ ಮತ್ತು ಮಹಿಳಾ ಸಬಲೀಕರಣ**

ಅಭಿವೃದ್ಧಿಗೆ ಮಹಿಳಾ ದೃಷಿಕೋನವಿಲ್ಲ. ದಿನೇ ದಿನೇ ತನ್ನ ವೇಗವನ್ನು ಹೆಚ್ಚಿಸಿಕೊಳ್ಳುತ್ತಿರುವ ದೇಶದ ಅಭಿವೃದ್ಧಿಯು ಯಾವ ಕ್ಷಣದಲ್ಲಿ ಗಕ್ಕನೆ ನಿಂತು ಗಿರಕಿ ಹೊಡೆದು ಪಲ್ಟಿಯಾಗುವುದೋ ಎಂಬ ಭಯ ಹುಟ್ಟಿಸುವಂತಿದೆ. ಬಿಹಾರ ರಾಜ್ಯದ ಅಭಿವೃದ್ಧಿಯನ್ನೇ ಒಂದು ಮಾದರಿಯನ್ನಾಗಿ ತೆಗೆದುಕೊಂಡರೆ, ಅತ್ಯಂತ ಹಿಂದುಳಿದ ರಾಜ್ಯವೆನಿಸಿದ್ದ ಅದು ಕಳೆದ ವರ್ಷ 11.3% ಅಭಿವೃದ್ಧಿ ವೇಗವನ್ನು ತೋರಿಸಿತು. ನುಣುಪಾದ ಚತುಷ್ಪಥ ರಾಷ್ಟ್ರೀಯ ಹೆದ್ದಾರಿಗಳು ದೊಡ್ಡ ದೊಡ್ಡ ಇಯಮಾರತುಗಳು, ಶಿಕ್ಷಣದಲ್ಲಿ ದುಡ್ಡು ಹಾಕಿ ಕಟ್ಟಿದ ಶಾಲೆಗಳು ಎಲ್ಲವೂ ಬಿಹಾರ ಅಭಿವೃದ್ಧಿ ಪಥದಲ್ಲಿದೆ ಎಂದು ಸಾರಿ ಸಾರಿ ಹೇಳುತ್ತಿವೆ.

ಜಾಗತೀಕರಣದ ದೃಷ್ಟಿಯಿಂದ ನೋಡಿದಾಗ ಖಂಡಿತವಾಗಿ ಬಿಹಾರವು ವಿಕಾಸದ ಪಥದಲ್ಲೇ ಇದೆ. ಮಾರುಕಟ್ಟೆ ದೃಷ್ಟಿಯಿಂದ ಅದರ ಬಾಗಿಲುಗಳೆಲ್ಲವೂ ಅಭಿವೃದ್ಧಿಗೆ ತೆರೆದುಕೊಂಡಿವೆ. ಆದರೆ ಮಾನವ ವಿಕಾಸದ ದೃಷ್ಟಿಕೋನದಿಂದ ನೋಡಿದಾಗ ಖಂಡಿತ ವಾಗಿಯೂ ಬಿಹಾರವು ಅಭಿವೃದ್ಧಿ ಪಥದಲ್ಲಿ ಇಲ್ಲ.

# ...ಜನೆ ಮತ್ತು ಮಹಿಳಾ ಸಬಲೀಕರಣ



ಮಕ್ಕಳ ಸಾವನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಬಿಹಾರದಲ್ಲಿ ಇನ್ನೂ ಅಂಧಕಾರದ ಯುಗವೇ ಮುಗಿದಿಲ್ಲ. ಅಲ್ಲಿ ಹುಟ್ಟುವ 1000 ಮಕ್ಕಳಲ್ಲಿ 85 ಮಕ್ಕಳು ಮೊದಲ ಹುಟ್ಟುಹಬ್ಬವನ್ನು ನೋಡುವುದಿಲ್ಲ.

ರಾಜ್ಯದ ಬೆಳವಣಿಗೆಯ ಸೂಚ್ಯಂಕವು ಏರುಗತಿಯಲ್ಲಿರುವಾಗ ಮಕ್ಕಳ ಸಾವಿನ ಸಂಖ್ಯೆ ಯನ್ನು ಕಡಿಮೆ ಮಾಡಲು ಸಾಧ್ಯವಾಗುತ್ತಿಲ್ಲವೇಕೆ? ಚಿಂತಿಸಬೇಕಾದ ಪ್ರಶ್ನೆ ಇದು.

ಅಭಿವೃದ್ಧಿಗೆ ಅಳವಡಿಸಿರುವ ಗುರಿಯಲ್ಲಿಯೇ ಏನೋ ಕೊರತೆ ಇರುವುದು ಈ ಪ್ರಶ್ನೆಯ ಉತ್ತರವಾಗಿ ನಮಗೆ ಕಾಣುತ್ತದೆ. ಅಭಿವೃದ್ಧಿಯ ದಿಶೆ, ಅದನ್ನಳೆಯುವ ಮಾಪಕ, ಅಭಿವೃದ್ಧಿಯನ್ನು ನೋಡುವ ದೃಷ್ಟಿಕೋನ. ನಾವು ಸಾಧಿಸ ಹೊರಟಿದ್ದು ದೇಶದ ಅರ್ಥಿಕಾಭಿವೃದ್ಧಿಯೋ ಅಥವಾ ದೇಶವಾಸಿಗಳ ಮಾನವಾಭಿವೃದ್ಧಿಯೋ ಎಂಬುದನ್ನು ಒರೆಗೆ ಹಚ್ಚಿ ನೋಡುವ ಕಾಲ ಬಂದಿದೆ. ಇದರಲ್ಲಿ ಮೊದಲನೆಯದು ಪುರುಷ ದೃಷ್ಟಿಕೋನದ ಅಭಿವೃದ್ಧಿ. ಅಲ್ಲಿ ಸ್ಪರ್ಧೆ ಇದೆ, ವೇಗವಿದೆ. ಮುಂದೆ ಓಡುವ ತವಕವಿದೆ. ಓಡುವಾಗ ಅಕ್ಕ ಪಕ್ಕದವರನ್ನೂ ಸರಿಸಿ, ನೂಕಿಬಿಡುವ, ಹೊಸಕಿ ಹಾಕುವ ಕ್ರೌರ್ಯವೂ ಇದೆ. ಏಕಮುಖದ ಆ ಅಭಿವೃದ್ಧಿಯಲ್ಲಿ ಸಂಪತ್ತು ಕೆಲವೇ ಜನರ ಕೈಯಲ್ಲಿ ಶೇಖರವಾಗುತ್ತ ಹೋಗುತ್ತದೆ. ಆಗ ಅದೆಷ್ಟು ಜನರ ಶೋಷಣೆ, ಬಲಿ, ಹಕ್ಕುಗಳ ನಾಶ ಆಗುವುದೋ ಗೊತ್ತಿಲ್ಲ. ಏಕೆಂದರೆ ದುಡಿಯುವ ಎಲ್ಲರ ಕ್ಷೇಮವನ್ನು ಪರಿಗಣಿಸುತ್ತ ನಡೆದರೆ ವಿಕಾಸದ ವೇಗವು ಖಂಡಿತ ಕುಂಠಿತಗೊಳ್ಳುತ್ತದೆ ಎನ್ನುತ್ತದೆ ಈ ದೃಷ್ಟಿಕೋನ. ಮಹಿಳಾ ದೃಷ್ಟಿಕೋನದ ಅಭಿವೃದ್ಧಿ ಪರಿಕಲ್ಪನೆಯೇ ಬೇರೆ. ಅಲ್ಲಿ ಸ್ಪರ್ಧೆಯ ಬದಲು ಹೊಂದಾಣಿಕೆ ಇರುತ್ತದೆ. ಏಕಮುಖಿ ಶೇಖರಣೆಯ ಬದಲು ಸಮಗ್ರ ಹಂಚಿಕೆಯಿರುತ್ತದೆ. ಸಂಪತ್ತು ಒಂದೇ ಕಡೆ ನಿಲ್ಲುವ ಬದಲು ಎಲ್ಲರ ಮಧ್ಯೆ ಹರಿದು ಹಂಚಿಕೊಳ್ಳುತ್ತದೆ. ಒಬ್ಬರನ್ನು ಒಬ್ಬರು ನೂಕಿ, ಹೊಡೆದುಹಾಕಿ ಓಡುವ ಬದಲು ಜೊತೆಗೂಡಿ ಸಾಗುವ ಮನೋಭಾವ ಇರುತ್ತದೆ.

90 ರ ದಶಕದಲ್ಲಿ ಜಾಗತೀಕರಣ ಬಂತು. ಬೇಡ ಬೇಡವೆಂದರೂ ಹೊಸ ಆರ್ಥಿಕ ನೀತಿ, ಬಂಡವಾಳಶಾಹಿ ಪ್ರವೃತ್ತಿ ಮತ್ತು ವಿದೇಶೀ ಕಂಪನಿಗಳಿಗೆ ದಾರಿ ಮಾಡಿಕೊಡಲು ರಚನಾತ್ಮಕ ಹೊಂದಾಣಿಕೆ ಕಾರ್ಯಕ್ರಮವನ್ನು ಒಪ್ಪಿಕೊಳ್ಳಲಾಯಿತು. ವಿದೇಶೀ ಕಂಪನಿಗಳಿಗೆ ಒಳಬರಲು ಇಲ್ಲಿನ ಕಾನೂನುಗಳೆಲ್ಲವನ್ನೂ ಸಡಿಲಗೊಳಿಸಬೇಕು. ಸ್ಥಳೀಯ ಕೈಗಾರಿಕೆಗಳು, ಗ್ರಾಮೀಣ ಉದ್ಯೋಗಗಳು ಮತ್ತು ವಿದೇಶೀ ಕೈಗಾರಿಕೆ ಎಲ್ಲವೂ ಒಂದೇ ಗೆರೆಯ ಮೇಲೆ ನಿಂತು ಸ್ಪರ್ಧೆಗಿಳಿಯಬೇಕು ಅಷ್ಟೇ ಅಲ್ಲ, ರಚನಾತ್ಮಕ ಹೊಂದಾಣಿಕೆಯ ತತ್ವಗಳಿಗನುಗುಣವಾಗಿ ಪ್ರಜೆಗಳಿಗೆ ಸಾರ್ವತ್ರಿಕವಾಗಿ ನೀಡುತ್ತಿದ್ದ ಪಡಿತರ ಆಹಾರ, ಪ್ರಾಥಮಿಕ ಆರೋಗ್ಯ ಸೇವೆ, ಕೃಷಿಗೆ ಸಬ್ಸಿಡಿ, ಇವೆಲ್ಲವನ್ನೂ ಕಿತ್ತುಕೊಳ್ಳಲಾಯಿತು. ಸರಕಾರ ತನ್ನ ಪ್ರಜೆಗಳಿಗೆ ಸಬ್ಸಿಡಿಗೆಂದು ಖರ್ಚು ಮಾಡುವುದನ್ನು ಕಡಿತಗೊಳಿಸಬೇಕೆಂಬುದು ರಚನಾತ್ಮಕ ಹೊಂದಾಣಿಕೆಯ ಷರತ್ತು. ಎಲ್ಲವನ್ನೂ ಮಾರುಕಟ್ಟೆಗೆ ಬಿಡಬೇಕು. ಮಾರುಕಟ್ಟೆ ನೋಡಿಕೊಳ್ಳುತ್ತದೆ. ಸ್ಪರ್ಧೆ ಇಲ್ಲಿ ಮುಖ್ಯ. ಎಲ್ಲವೂ ಎಲ್ಲರೂ ಸ್ಪರ್ಧೆಗೆ ನಿಲ್ಲಬೇಕು. ಸ್ಪರ್ಧೆ ಇದ್ದಾಗ ಮಾತ್ರ ಉದ್ಯೋಗಾವಕಾಶ, ಸಂಪತ್ತು ಬೆಳೆಯುತ್ತದೆ ಎಂದೆಲ್ಲ ನಂಬಿಸಲಾಯಿತು. ಮಾರುಕಟ್ಟೆಯ ಬೆಳವಣಿಗೆ, ಆರ್ಥಿಕತೆಗಳೇ ಅಭಿವೃದ್ಧಿಯ ಅಳತೆಗೋಲುಗಳಾದಾಗ ಮಾನವಾಭಿವೃದ್ಧಿಯು ಹಿಂದೆ ಸರಿಯುತ್ತದೆ ಎಂಬುದಕ್ಕೆ ಮಕ್ಕಳ ಅಪೌಷ್ಟಿಕತೆಯ ಪ್ರಮಾಣ ಹಿಡಿತಕ್ಕೆ ಬಂದಿಲ್ಲದಿರುವುದು ಒಂದು ನಿದರ್ಶನ.

ಪ್ರತಿಯೊಂದು ಸೇವೆಗೂ ಪೂರ್ಣ ಪ್ರಮಾಣದಲ್ಲಿ ಕರ ತೆರಬೇಕು ಎಂದಾದಾಗ ಜನರಿಗೆ ಗಳಿಕೆಯನ್ನು ಹೆಚ್ಚು ಮಾಡಿಕೊಳ್ಳದಿದ್ದರೆ ಉಳಿಗಾಲವಿಲ್ಲ. ಸ್ಥಳೀಯ ಉದ್ಯೋಗಾವಕಾಶಗಳು, ಕೃಷಿ, ಗ್ರಾಮೀಣ ಕೈಗಾರಿಕೆ ಯಾವುದೂ ಸಾಕಷ್ಟು ಹಣವನ್ನು ನೀಡದಿದ್ದಾಗ ನಾಗರಿಕ ವಲಸೆ ಹೊರಟ. ಹೆಚ್ಚು ಗಳಿಸಬೇಕು ಎಂಬುದೊಂದೇ ಜೀವನದ ತತ್ವವಾದಾಗ ಮನುಷ್ಯ ತನ್ನ ಉಳಿಯುವಿಕೆಗಾಗಿ ಮನೆಯವರೆಲ್ಲರನ್ನೂ ದುಡಿಯಲು ಹಚ್ಚಿದ. ಪುಟ್ಟ ಮಗು, ಬಸುರಿ, ಬಾಣಂತಿ, ಅಂಗವಿಕಲರು ಎಲ್ಲರೂ ದುಡಿಯಬೇಕು, ಗಳಿಸಬೇಕು, ಅಂದಾಗ ಮಾತ್ರ ಎಲ್ಲರಿಗೂ ಊಟ. ಬಂಡವಾಳವಿದ್ದಲ್ಲಿ, ಕೆಲಸವಿದ್ದಲ್ಲಿ, ಗುಳೆ ಹೊರಟಿತು ಜನತೆ. ಮೊದಲು ಗಂಡ, ನಂತರ ಹೆಂಡತಿ, ಸಾಧ್ಯವಾದರೆ ಇಡೀ ಕುಟುಂಬ. ಕಾಣದ ಊರಿಗೆ, ಮಾಡಿ ಗೊತ್ತಿಲ್ಲದ ಕೆಲಸಕ್ಕೆ. ಇಟ್ಟಿಗೆ ಭಟ್ಟಿಯಿಂದ ಹಿಡಿದು ಮನೆ ಕಟ್ಟುವಲ್ಲಿಗೆ, ಮನೆಗಳನ್ನು ಕೆಡವುದರಿಂದ ಹಿಡಿದು ಇಮಾರತು ನಿರ್ಮಾಣದವರೆಗೆ, ಮರಗಳನ್ನು ಕಡಿದು ರಸ್ತೆ ಅಗಲ ಮಾಡುವುದು, ರಸ್ತೆ ಅಗೆದು ಚತುಷ್ಪಥ ನಿರ್ಮಾಣದವರೆಗೆ ಎಲ್ಲಾ ಕೆಲಸಗಳಿಗೂ ಹಳ್ಳಿಗಳಿಂದ ಅಕುಶಲ ಕಾರ್ಮಿಕರು ಎದ್ದು ಹೊರಟರು. ಹೆಚ್ಚೆಚ್ಚು ಕುಟುಂಬಗಳು ಕೆಲಸ ಕೇಳಿ ಗ್ರಾಮದಿಂದ ಹೊರ ಬಂದುದರ ಪರಿಣಾಮ ಅವರ ಕುಟುಂಬ ಜೀವನ ಛಿದ್ರವಾಯಿತು. ಮಕ್ಕಳಿಗೆ, ಅಬಲರಿಗೆ ಕುಟುಂಬಗಳು ಕೊಡುತ್ತಿದ್ದ ರಕ್ಷಣೆ ಇಲ್ಲವಾಗಿ ಮಾನವಾಭಿವೃದ್ಧಿಯ ಸೂಚ್ಯಾಂಕಗಳೂ ನೆಲಕಚ್ಚಿದವು.

ರಕ್ತಹೀನತೆ, ಅಪೌಷ್ಟಿಕತೆಗಳು ದೈಹಿಕ, ಮಾನಸಿಕ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತವೆ. ಅಪೌಷ್ಟಿಕ ಮಕ್ಕಳು ಅಪೌಷ್ಟಿಕ ಯುವಜನತೆಯಾಗಿ ಬೆಳೆಯುತ್ತಾರೆ. ಸರಿಯಾಗಿ ಓದಲಾರದೆ, ಚೆನ್ನಾಗಿ ಗ್ರಹಿಸಲಾರದೆ, ಅರ್ಥ ಮಾಡಿಕೊಳ್ಳಲಾರದೆ ಶಿಕ್ಷಣದಲ್ಲಿ ಹಿಂದೆ ಬೀಳುತ್ತಾರೆ. ದುಡಿಯುವ ವರ್ಗ ಅವರನ್ನೂ ಒಳಸೇರಿಸಿಕೊಳ್ಳುತ್ತದೆ. ಅಕುಶಲ, ಅರೆ ಶಿಕ್ಷಿತ, ಅಸಮರ್ಥ ಯುವಜನಾಂಗ ನಿರ್ಮಾಣವಾಗುತ್ತದೆ. ಹಣದ ಗಳಿಕೆ ಮತ್ತು ಗ್ರಾಹಕ ವಸ್ತುಗಳ ಮಾರಾಟ ಹೆಚ್ಚಿ ಆರ್ಥಿಕ ಅಭಿವೃದ್ಧಿ ಆಗುತ್ತದೆ ಹೊರತು ಮಾನವ ಅಭಿವೃದ್ಧಿಯಲ್ಲ.

ಇಂದು ದೇಶ ಎಲ್ಲಿ ನಿಂತಿದೆ? ಅಭಿವೃದ್ಧಿಯ ಏರು ಪಥದಲ್ಲಿಯೇ? ಅಥವಾ ನೆಲಕ್ಕುರುಳುವ ಇಳಿಜಾರಿನಲ್ಲೇ? ದೇಶದ 50% ಮಕ್ಕಳು ಅಪೌಷ್ಟಿಕತೆಯುಳ್ಳ ಮಕ್ಕಳು. ದೇಶದ 90% ಮಹಿಳೆಯರು ರಕ್ತಹೀನತೆಯಿಂದ ಬಳಲುವವರು. ದಿಕ್ಕು ದೆಸೆ ತಪ್ಪಿದ ಯುವಜನತೆ, ಸೋತು ಹಣ್ಣಾಗಿರುವ ಕೂಲಿಕಾರ್ಮಿಕರು. ಒತ್ತಡ, ಆತಂಕದಲ್ಲಿ ಬದುಕುತ್ತಿರುವ ಜನತೆ.

ದೇಶದ ಚಿತ್ರವು ಹೀಗಿದೆ ಎಂದು 'ನ್ಯಾಷನಲ್ ಫ್ಯಾಮಿಲಿ ಸರ್ವೆ' ಮತ್ತೆ ಮತ್ತೆ ಅಂಕಿ ಅಂಶಗಳೊಂದಿಗೆ ಎತ್ತಿ ತೋರಿಸಿದಾಗ ಗರ್ಭಿಣಿಯರಿಗಾಗಿ, ಬಾಣಂತಿಯರಿಗಾಗಿ, ಯುವತಿಯರಿಗಾಗಿ ಸರಕಾರವು ಸಮಗ್ರ ಶಿಶು ಅಭಿವೃದ್ಧಿ ಕಾರ್ಯಕ್ರಮವನ್ನು ಜಾರಿಯಲ್ಲಿ ತಂದಿತು. ಆದರೆ ಈ ಕಾರ್ಯಕ್ರಮದ ಫಲವನ್ನು ಪಡೆಯಲು ಗರ್ಭಿಣಿ, ಬಾಣಂತಿ ಮತ್ತು ಮಕ್ಕಳು ಎಷ್ಟು ಜನ ಗ್ರಾಮದಲ್ಲಿದ್ದಾರೆ? ಹೆಚ್ಚು ಕೂಲಿಯನ್ನರಸಿ ಪಟ್ಟಣದತ್ತ ಮುಖ ಮಾಡಿ ಸ್ಲಂ ಸೇರಿದ ಅವರು ಇಲ್ಲಿಯೂ ಇಲ್ಲದೆ, ಅಲ್ಲಿಯೂ ಸಲ್ಲದೆ ಅಸ್ತಿತ್ವವಿಲ್ಲದವರಾಗಿದ್ದಾರೆ. ಹಾಗಾಗಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು ತನ್ನ ಗುರಿ ಮುಟ್ಟುವಲ್ಲಿ ಸೋಲುತ್ತದೆ. ತಾಯಂದಿರ ಸಾವು, ಶಿಶುಮರಣ ನಿಯಂತ್ರಣಕ್ಕೆ ಬರುತ್ತಿಲ್ಲ, ಮಾನವಾಭಿವೃದ್ಧಿ ಸೂಚ್ಯಂಕ ಮೇಲಕ್ಕೇರುತ್ತಿಲ್ಲ ಎಂದು ಮತ್ತೆ ಸರ್ವೆಗಳು ಎತ್ತಿ ತೋರಿಸಿದಾಗ ಮತ್ತಷ್ಟು ಯೋಜನೆಗಳು. ಇಂಥ ಯೋಜನೆಯೊಂದನ್ನು ತರುವ ಮೊದಲು ಜನರು ಹಳ್ಳಿಯಲ್ಲೆ ಇರುವಂತೆ ಮಾಡುವ ಯೋಜನೆಯೊಂದು ಜಾರಿಗೆ ಬರಬೇಕಾಗಿತ್ತು. ನೀರು ಬಿದ್ದ ಮೇಲೆ ಒರೆಸುವುದಕ್ಕಿಂತ ನೀರು ಬೀಳದಂತೆ ತಡೆಯುವಲ್ಲಿ ಜಾಣತನವಿತ್ತು. ಆದರೆ ಹಾಗೆ ಮಾಡಲಿಲ್ಲ ನಾವು.

ಸ್ಪಷ್ಟ ಗುರಿಯೇ ಇಲ್ಲದ ದ್ವಂದ್ವ ನೀತಿಗಳೇ ತುಂಬಿವೆ ಸರಕಾರದಲ್ಲಿ. ಒಂದೆಡೆ ವಿದೇಶೀ ಸೂತ್ರದಾರರಿಗೆ ಕೊರಳೊಡ್ಡಿ ಅವರು ಹಾಕಿದ ಎಲ್ಲಾ ಷರತ್ತುಗಳಿಗೆ ತಲೆಯಾಡಿಸಿ ಸಹಿಮಾಡುತ್ತದೆ. ಅದರ ದುಷ್-ಪರಿಣಾಮವು ಸಮಾಜದ ಮೇಲೆ ಆಗಿದ್ದು ಮುಖಕ್ಕೆ ರಾಚಿದಾಗ ಜನರ ಉದ್ಧಾರದ ನೀತಿಗಳು. ಆದಿವಾಸಿಗಳನ್ನು ಕಾಡಿನಿಂದ ಹೊರಹಾಕುವ ಕೃತ್ಯಗಳು, 'ಅರಣ್ಯವಾಸಿಗಳಿಗೇ ಅರಣ್ಯ' ಎಂಬ ನೀತಿಗಳು. ಕಾಗದದಲ್ಲಿ ಜನರಿಗೆ ಉದ್ಯೋಗ ಕೊಡುವ ನೀತಿಗಳು. ನಿಜದಲ್ಲಿ ಜೆಸಿಬಿ ಕಾಂಟ್ರಾಕ್ಟರುಗಳಿಗೆ ಗುತ್ತಿಗೆಗಳು. ನೀತಿ ಬರೆಯುತ್ತಿರುವ ಕೈಗಳೇ ಬೇರೆ, ಸೂತ್ರ ಹಿಡಿದಿರುವ ಕೈಗಳೇ ಬೇರೆ. ಯೋಜನೆ ಹಾಕುವ, ನೀತಿ ರೂಪಿಸುವ ಸ್ವಾತಂತ್ರ್ಯವನ್ನೇ ತಾನು ಕಳೆದುಕೊಂಡಿದ್ದೇನೆನ್ನುವ ಅರಿವು ಸರಕಾರಕ್ಕಿಲ್ಲ. ಆದ್ಯತೆ ಯಾವುದೆಂದು ತನಗೇ ಗೊತ್ತಿಲ್ಲದಷ್ಟು ಎಡಬಿಡಂಗಿತನ. ಇಂಥ ಸಂಕೀರ್ಣ ಸ್ಥಿತಿಯಲ್ಲಿ, ಸಂಕ್ರಮಣ ಸಮಯದಲ್ಲಿ, ಹೊಸ ಕಾನೂನುಗಳು, ಯೋಜನೆಗಳು ಬದಲಾವಣೆ ತರಬಲ್ಲವೇ? ಖಂಡಿತ ತರಬಲ್ಲವು. ಆದರೆ ಅವನ್ನು ಪಡೆದುಕೊಳ್ಳಲು ಜನರಿಗೆ ಮಾಹಿತಿ ಬೇಕು, ತಲುಪಿಸಲು ಅಧಿಕಾರಿಗಳಿಗೆ ಬದ್ಧತೆ ಬೇಕು. ಕೊಡುವ-ಪಡೆಯುವ ವಾತಾವರಣದ ನಿರ್ಮಾಣ ಆಗಬೇಕು.

ಕೊಡುವ-ಪಡೆಯುವ ವಾತಾವರಣ ಎಂದರೆ ಮತ್ತೇನಲ್ಲ, ಸಾಮಾಜಿಕ ವ್ಯವಸ್ಥೆ ಮತ್ತು ಜಾಗತಿಕ ಒಪ್ಪಂದಗಳು, ರಾಷ್ಟ್ರೀಯ ನೀತಿಗಳು ಮಕ್ಕಳ ಸ್ನೇಹಿ, ಲಿಂಗ ಸೂಕ್ಷ್ಮ ಇರಬೇಕಾದ ಅವಶ್ಯಕತೆ ಬಹಳವಿದೆ. ಮಕ್ಕಳು ಮತ್ತು ಮಹಿಳೆಯರ ಬದುಕಿನಲ್ಲಿ ಗುಣಾತ್ಮಕ ಬದಲಾವಣೆಗಳನ್ನು ತರುವುದು ಸರಕಾರದ ಗುರಿಯಾಗಿದ್ದರೆ ನೀತಿಗಳನ್ನು ತರುವುದರಲ್ಲಿ ಇರುವ ಆಸಕ್ತಿಯು ಆ ಬದಲಾವಣೆಗೆ ಅಡ್ಡಿಪಡಿಸುವಂಥ ವ್ಯವಸ್ಥೆಯಲ್ಲಿಯೂ ಅಮೂಲಾಗ್ರ ಬದಲಾವಣೆಗಳನ್ನು ತರುವುದಕ್ಕೆ ಬದ್ಧವಾಗಿರಬೇಕು. ನಮ್ಮ ದೇಶದಲ್ಲಿ ಮಹಿಳಾಪರ ಕಾನೂನುಗಳು ಅನೇಕ ಬಂದವು. ಆದರೆ ಹೊರನೋಟಕ್ಕೆ ಅವು ಮಹಿಳಾಪರ ಆಗಿದ್ದರೂ ಕೂಡ ವಾಸ್ತವದಲ್ಲಿ ಪುರುಷ ಪ್ರಧಾನ ಮೌಲ್ಯವು ಆ ಕಾನೂನನ್ನು ಆಳುತ್ತಿರುತ್ತದೆ. ವರದಕ್ಷಿಣೆ, ಬಾಲ್ಯವಿವಾಹ, ಹೆಣ್ಣು ಭ್ರೂಣ ಹತ್ಯೆ ನಿಷೇಧ ಕಾನೂನುಗಳನ್ನು ಬರೆಯುವುದರಲ್ಲಿದ್ದ ಆಸಕ್ತಿ ಅದರ ಪಾಲನೆಯಲ್ಲಿ ಕಾಣುತ್ತಿಲ್ಲ. ಹೆಣ್ಣಿನ ಬದುಕಿನ ಕುರಿತು, ಹೆಣ್ಣಿನ ಅಸ್ತಿತ್ವದ ಕುರಿತು ದಿವ್ಯ ನಿರ್ಲಕ್ಷ್ಯ ಇರುವುದನ್ನು ಪ್ರತಿಯೊಬ್ಬ ಅಧಿಕಾರಿಯಲ್ಲಿ ನಾವು ಕಾಣುತ್ತೇವೆ. ಗ್ರಾಮದಲ್ಲಿ ಇಲ್ಲದ ಕುಟುಂಬಕ್ಕಾಗಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆ ತಯಾರಿಸಿದಂತೆ, ಹೆಣ್ಣು ಮಕ್ಕಳು ಬದುಕಿದ್ದಾರೋ ಇಲ್ಲವೋ ಮುಖ್ಯವಲ್ಲ, ಆದರೆ ಅವರಿಗಾಗಿ ಕಾನೂನುಗಳನ್ನು ಎಷ್ಟೊಂದು ತಂದಿದ್ದೇವೆಂದು ಜಾಗತಿಕ ಮಟ್ಟದಲ್ಲಿ ಹೇಳಿಕೊಳ್ಳುವಷ್ಟಕ್ಕೇ ಸೀಮಿತ ಗುರಿ ಇರುವ ಕಾನೂನುಗಳಿವು.

ದ್ವಿಪತ್ನಿತ್ವ ನಿಷೇಧವಾಗಿದೆ. ಆದರೆ ಅಂಥ ಪ್ರಕರಣಗಳ ಕುರಿತು ಎಲ್ಲರ ಅಭಿಪ್ರಾಯವೇನು? ಮೊದಲ ಹೆಂಡತಿಯೇ ಒಪ್ಪಿ ಮದುವೆ ಮಾಡಿಸಿರುವಾಗ, ಮೊದಲ ಹೆಂಡತಿಗೇ ತಕರಾರು ಇಲ್ಲವಾದಾಗ ನಿಮಗೇಕೆ ಇಲ್ಲದ ಉಸಾಬರಿ ಎಂಬುದು. ಹಾಗೆಯೇ ವರದಕ್ಷಿಣೆ ಬೆಂಕಿಗೆ ವಧು ಬಲಿಯಾದಾಗ ಪೊಲೀಸರು, ಅಥವ ಸಂಬಂಧಿಕರು ಹೇಳುವ, 'ಹೋದ ಜೀವವಂತೂ ಹೋಯಿತು, ನೀವು ಗಂಡನ ಮನೆಯವರಿಗೆ ಶಿಕ್ಷೆ ವಿಧಿಸಿದಾಕ್ಷಣ ಆಕೆ ಮರಳಿ ಬರುತ್ತಾಳೆಯೇ?' ಎಂಬ ಧೋರಣೆ. ಇತ್ತೀಚೆಗೆ ಖಾನಾಪುರದ ಹಳ್ಳಿಯೊಂದರಲ್ಲಿ ವರದಕ್ಷಿಣೆ ಹಿಂಸೆಗೆ ಮಹಿಳೆಯನ್ನು ಕೊಂದು ನೇಣು ಹಾಕಿದ ಗಂಡ, ಅತ್ತೆಯ ವಿರುದ್ಧ ತವರಿನವರು ದೂರು ಕೊಡಲು ಮುಂದಾದಾಗ ಒಂದು ಲಕ್ಷ ರೂಪಾಯಿ ಕೊಟ್ಟು ಅವರ ಬಾಯಿ ಮುಚ್ಚಿಸಿದ್ದರು. ಮಹಿಳೆಗಾದ ಅನ್ಯಾಯವನ್ನು ಒಂದು ಲಕ್ಷದಲ್ಲಿ ಬಗೆಹರಿಸಿದ್ದರವರು. 'ಒಟ್ಟಾರೆ ಹೆಣ್ಣಿನ ಜೀವ ಕ್ಷುಲ್ಲಕ ನೋಡ್ರಿ. ದುಡ್ಡು ಕೊಟ್ಟರೆ ಹೆತ್ತ ತಾಯಿ ತಂದೆಯರೂ ಸುಮ್ಮನಾಗುತ್ತಾರೆ ಹೊರತು ಅನ್ಯಾಯ ಮಾಡಿದವರಿಗೆ ಶಿಕ್ಷೆ ಆಗುವಂತೆ ನೋಡಿಕೊಳ್ಳುವುದಿಲ್ಲ' ಎಂದ ಹಳ್ಳಿ ಹೆಣ್ಣುಮಗಳೊಬ್ಬಳ ಮಾತು ಸರಳ ಸತ್ಯ. ಹೆಣ್ಣಿನ ವಿರುದ್ಧದ ಸಮಾಜದ ಪೂರ್ವಗ್ರಹಗಳು ಅತ್ಯಾಚಾರದ ಪ್ರಕರಣಗಳಲ್ಲಿ ಎದ್ದು ಕಾಣುತ್ತವೆ. ತನ್ನ ಮೇಲೆ ಅತ್ಯಾಚಾರ ನಡೆಯುವುದಕ್ಕೆ ಹೆಣ್ಣು ತಾನೇ ಕಾರಣ ಎಂಬ ಭಾವನೆಯಿಂದ ಪೊಲೀಸ್, ನ್ಯಾಯಾಂಗ ವ್ಯವಸ್ಥೆಗಳು ಹೊರಬರುತ್ತಿಲ್ಲ. ಎಲ್ಲಿಯವರೆಗೆ ವ್ಯವಸ್ಥೆಯಲ್ಲಿ ಹಾಸುಹೊಕ್ಕಾಗಿರುವ ಲಿಂಗ ಪೂರ್ವಗ್ರಹಗಳಿಂದ ಆ ವ್ಯವಸ್ಥೆಯನ್ನು ನಿರ್ವಹಿಸುವವರು ಹೊರ ಬರುವುದಿಲ್ಲವೋ ಅಲ್ಲಿಯವರೆಗೆ ಹೆಣ್ಣಿನ ಪರವಾಗಿ ಯಾವುದೇ ಕಾನೂನು ಎಷ್ಟು ಬಂದರೂ ಪ್ರಯೋಜನವಿಲ್ಲ. ಹೆಣ್ಣಿನ ಬಗ್ಗೆ ಸಮಾನ ಭಾವನೆ ಬೆಳೆಸಿಕೊಳ್ಳದ ಹೊರತು ಯಾವುದೇ ಕಾನೂನಿರಬಹುದು, ಯಾವುದೇ ಮಹಿಳಾ ಪರ ಯೋಜನೆ ಇರಬಹುದು ಅದು ನಿಜವಾದ ಅರ್ಥದಲ್ಲಿ ಜಾರಿಯಾಗಲು ಸಾಧ್ಯವೇ ಇಲ್ಲ. ಹೆಣ್ಣಿನ ಬಗ್ಗೆ ನಿಜವಾದ ಕಳಕಳಿ ಇದ್ದಿದ್ದರೆ ಈಗಾಗಲೆ ಅಸ್ತಿತ್ವದಲ್ಲಿದ್ದ ಕಾಯಿದೆಗಳನ್ನೇ ಬಳಸಿ ವೈವಾಹಿಕ ಜೀವನದಲ್ಲಿನ ಹಿಂಸೆ, ವರದಕ್ಷಿಣೆಯ ಕೊಲೆ, ಅತ್ಯಾಚಾರ, ಆಸ್ತಿ ಹಕ್ಕಿನಿಂದ ಅವಳನ್ನು ವಂಚಿಸುವುದು ಇವೆಲ್ಲ ಪಿಡುಗುಗಳಿಂದ ಅವಳನ್ನು ರಕ್ಷಿಸಬಹುದಿತ್ತು. ಇಂಥ ಹಿನ್ನೆಲೆಯಲ್ಲಿ ಸರಕಾರವು ತರಲು ಪ್ರಯತ್ನಿಸುತ್ತಿರುವ ಹೊಸ ಹೊಸ ಕಾನೂನು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾನೂನು.

### ಉದ್ಯೋಗ ಖಾತರಿ

ಸಂವಿಧಾನದ 21 ನೇ ಪರಿಚ್ಛೇದದಲ್ಲಿ ಹೇಳಿರುವ ಬದುಕುವ ಹಕ್ಕನ್ನು ಎತ್ತಿ ಹಿಡಿಯಲು ಬಂದ ಕಾಯಿದೆ ಉದ್ಯೋಗದ ಹಕ್ಕು ಕಾಯಿದೆ. ಖಾತ್ರಿಯಾಗಿ ಉದ್ಯೋಗ ಪಡೆಯುವುದು ಜನರ ಹಕ್ಕು ಮತ್ತು ನೀಡುವುದು ಸರಕಾರದ ಕರ್ತವ್ಯ ಎನ್ನುತ್ತದೆ ಈ ಕಾನೂನು. ಬದುಕುವ ಹಕ್ಕನ್ನು ಎತ್ತಿ ಹಿಡಿಯುವುದರ ಜೊತೆಗೆ ಸ್ತ್ರೀ ಪುರುಷ ಇಬ್ಬರಿಗೂ ಸಮಾನ ಕೂಲಿ ನೀಡುವುದರ ಮೂಲಕ ಸಮಾಜದಲ್ಲಿ

ಇಬ್ಬರ ಸ್ಥಾನ ಮಾನ ಸಮಾನ ಎಂಬ ವಿಚಾರವನ್ನೂ ಈ ಕಾಯಿದೆ ಎತ್ತಿ ಹಿಡಿಯುತ್ತದೆ. ಅಷ್ಟೇ ಅಲ್ಲ, ಕೂಲಿಗಾಗಿ ಬರುವ ತಾಯಂದಿರ ಜೊತೆಗೆ ಅವರ ಚಿಕ್ಕ ಚಿಕ್ಕ ಮಕ್ಕಳೂ ಬರುತ್ತಿದ್ದರೆ, ಅಂಥ ಐದು ಮಕ್ಕಳನ್ನು ನೋಡಿಕೊಳ್ಳುವ ಕೆಲಸವನ್ನೇ ಒಬ್ಬ ಕೂಲಿಕಾರ ಮಹಿಳೆ ಮಾಡಬಹುದು, ಆಕೆಗೂ ಒಂದು ದಿನದ ಸಮಾನ ಕೂಲಿ ಸಿಗುತ್ತದೆ ಎನ್ನುವ ಅಂಶ, 'ಮಕ್ಕಳನ್ನು ನೋಡಿಕೊಳ್ಳುವುದೂ ಒಂದು ಗುರುತರ ಉದ್ಯೋಗ' ಎಂದು ಪರಿಗಣಿಸುತ್ತದೆ. ಒಂದು ತಾಸು ವಿಶ್ರಾಂತಿಗೆ ಸಮಯ, ವಿಶ್ರಾಂತಿಗಾಗಿ ನೆರಳು, ಕುಡಿಯುವ ನೀರಿನ ವ್ಯವಸ್ಥೆ ಮತ್ತು ಐದು ಕಿಲೋಮೀಟರ್ ಒಳಗಡೆಯೇ ಕೆಲಸ ಕೊಡಬೇಕೆಂಬ ಅಂಶಗಳು ಖಂಡಿತವಾಗಿ ಕಾಯಿದೆ ಮಾಡುವವರಲ್ಲಿನ ಲಿಂಗ ಸೂಕ್ಷ್ಮತೆಯನ್ನು ಎತ್ತಿ ತೋರಿಸುತ್ತದೆ. ಕೆಲಸದ ಜಾಗದಲ್ಲಿ ನಮ್ಮ ತಾಯಂದಿರು ಇನ್ನೂ ಹೆಚ್ಚೇನನ್ನು ನಿರೀಕ್ಷಿಸುತ್ತಾರೆ?

ನಮ್ಮ ಎಲ್ಲಾ ಕಾನೂನುಗಳಂತೆಯೇ ಈ ಕಾನೂನಿಗೂ ಕೂಡ ಜಾರಿಯಾಗುವುದಕ್ಕೆ ಅಡ್ಡಿಗಳು ಅನೇಕ. ಜನರಿಗೆ ಮಾಹಿತಿಯನ್ನು ಕೊಡುವುದಕ್ಕಾಗಿಯೇ ಸಾಕಷ್ಟು ಹಣ ಅವಕಾಶಗಳು ಇದ್ದರೂ ಕೂಡ ಜನರಿಗೆ ಮಾಹಿತಿ ಕೊಡುವುದು ಅಧಿಕಾರಿಗಳಿಗೆ ಆದ್ಯತೆಯಾಗಿ ಕಂಡೇ ಇಲ್ಲ. ನೂರಕ್ಕೆ 60 ರಷ್ಟು ಭಾಗ ಅನಕ್ಷರಸ್ಥರೇ ತುಂಬಿರುವ ಈ ದೇಶದ ಹಳ್ಳಿಗಳ ಗೋಡೆಗಳ ಮೇಲೆ ಉದ್ಯೋಗ ಖಾತರಿಯ ಬಗ್ಗೆ ಬರೆಯುವು ದರಲ್ಲಿಗೇ ಮಾಹಿತಿ ಕೊಡುವ ಕಾರ್ಯಕ್ರಮ ಮುಗಿಯುತ್ತದೆ. ಕೇವಲ ಮಾಹಿತಿ ಕೊಡುವುದಲ್ಲದೇ ಅವಶ್ಯಕತೆ ಇದ್ದವರಿಗೆ ಯೋಜನೆಯನ್ನು ತಲುಪಿಸಿ ತನ್ಮೂಲಕ ಜನರ ಸಂಘಟನೆಯನ್ನು ಮಾಡಿದಾಗಲೇ ವಿಚಾರವು ಜನಕ್ಕೆ ಹೆಚ್ಚೆಚ್ಚು ವೇದ್ಯವಾಗುತ್ತದೆ.

**ಹೆಚ್ಚಿನ ವೇತನಕ್ಕಾಗಿ ಪ್ರಭುತ್ವದ ವಿರುದ್ಧ ಹೋರಾಟ-ಹಂದೂರಿನ ಕತೆ**

ಹಂದೂರು ಖಾನಾಪುರ ತಾಲೂಕಿನ ಇನ್ನೊಂದು ಹಳ್ಳಿ. ಜಾಗೃತಿ ಸಂಸ್ಥೆ ನಡೆಸಿದ ಉದ್ಯೋಗ ಖಾತರಿ ತಿಳುವಳಿಕೆ ಸಮಾವೇಶ ಮತ್ತು ತರಬೇತಿಗಳಲ್ಲಿ ಹಂದೂರಿನ ಮಹಿಳೆಯರು ಭಾಗವಹಿಸಿದ್ದರು. ಆದರೆ ಮಾಹಿತಿ ಸಿಕ್ಕು, ತರಬೇತಿ ಆಗಿ ಉದ್ಯೋಗದ ಹಕ್ಕನ್ನು ಅರ್ಥೈಸಿಕೊಂಡು ಸಂಘಟಿತರಾಗಿ ಮಹಿಳೆಯರು ಕೆಲಸ ಕೇಳಲು ಹೋಗುವ ಹೊತ್ತಿಗೆ 2008ರ ಮಳೆಗಾಲ ಶುರುವಾಗಿತ್ತು. ಆ ವೇಳೆಗಾಗಲೇ ಕೃಷಿ ಕಾರ್ಯಕ್ಕೆಂದು ಕೂಲಿಗಳ ಬೇಡಿಕೆ ಏರಿತ್ತು. ಹಂದೂರಿನಲ್ಲಿ ಗಂಡಸರ ವೇತನ 50 ರೂ. ಹೆಂಗಸರದ್ದು 30 ರೂ. ಈ ಕೂಲಿಕಾರ ಮಹಿಳೆಯರು ತಮ್ಮ ಕೂಲಿ ದರವನ್ನು ಏರಿಸಿ ಎಂದು ಊರ ಹಿರಿಯರನ್ನು ಕೇಳಿಕೊಂಡರು. 'ಉದ್ಯೋಗ ಖಾತರಿ ಬಂದು ರೈತರಿಗೆ ಫಜೀತಿಯಾಗಿದೆ, ಕೂಲಿಗಳೇ ಸಿಗುತ್ತಿಲ್ಲ' ಎಂಬ ಅಭಿಪ್ರಾಯ ಇನ್ನೂ ಯಾರಿಗೂ ಕೆಲಸ ಸಿಗುವ ಮೊದಲೇ ರೈತ ಸಮುದಾಯದಲ್ಲಿ ಮೂಡತೊಡಗಿತ್ತು. ಹಂದೂರಿನಲ್ಲಿ ವಿಠ್ಠಲ ಸಾವ್ಕಾರ ಊರಿಗೇ ದೊಡ್ಡ ಮನುಷ್ಯ. ಆತ ಹೇಳಿದ ಮೇಲೆ ಮುಗಿಯಿತು. ಯಾರೂ ಮೀರುವಂತಿಲ್ಲ. ವೇತನ ಹೆಚ್ಚು ಮಾಡುವುದಿಲ್ಲ, ಹಿಂದಿನ ದರದಲ್ಲೇ ಕೂಲಿಗೆ ಬನ್ನಿ ಎಂದು ಆತ ಕೂಲಿಕಾರರಿಗೆ ಹೇಳಿಕಳಿಸಿದ. 'ಜಾಸ್ತಿ ಕೊಡದಿದ್ದರೆ ನಾವು ಬರುವುದಿಲ್ಲ.' ಎನ್ನುತ್ತ ಕೂಲಿಕಾರರೆಲ್ಲ ಉದ್ಯೋಗ ಖಾತ್ರಿ ಕೆಲಸದತ್ತ ನಡೆದರು. ರಸ್ತೆಗೆ ಮಣ್ಣು ಹಾಕುವುದು ನಡೆದಿತ್ತು. ವಿಠ್ಠಲ ಸಾಹುಕಾರ ಅಲ್ಲಿಗೇ ಹಾಜರಾದ. ಹೆಣ್ಣುಮಕ್ಕಳನ್ನೂ, ಕೆಲಸ ಮಾಡಿಸುತ್ತಿದ್ದವರನ್ನೂ ವಾಚಾಮಗೋಚರ ಬೈದ. ಹೆಣ್ಣುಮಕ್ಕಳ ಜುಟ್ಟು ಹಿಡಿದೆಳೆದ. ಕೈಯಲ್ಲಿದ್ದ ಬುಟ್ಟಿ ಸಲಿಕೆಗಳನ್ನು ಕಿತ್ತುಕೊಂಡು ಎಲ್ಲರನ್ನೂ ಓಡಿಸಿಬಿಟ್ಟ, 'ಇನ್ನೊಮ್ಮೆ ಈ ಕೆಲಸಕ್ಕೆ ಹಾಜರಾದರೆ ಕೊಂದು ಬಿಡುತ್ತೇನೆ.' ಎಂದು ಗರ್ಜಿಸಿದ. ಮಹಿಳೆಯರಿಗೆ ಇನ್ನಿಲ್ಲದಷ್ಟು ಅಪಮಾನವಾಗಿತ್ತು. ತಿರುಗಿ ಉದ್ಯೋಗ ಖಾತರಿ ಕೆಲಸಕ್ಕೆ ಹೋಗಲಿಕ್ಕೆ ಅಂಜಿಕೆ. ಸಾವ್ಕಾರನ ಹೊಲಕ್ಕೆ ಹೋಗುವುದಂತೂ ಸಾಧ್ಯವಿಲ್ಲದ ಮಾತು. ಕೂಲಿ ಮಾಡದಿದ್ದರೆ ಗತಿ ಇಲ್ಲ. ಕಡೆಗೆ ಎಲ್ಲರೂ ಸೇರಿಕೊಂಡು, ಆದದ್ದಾಗಲಿ, ಈ ಹಳ್ಳಿಯಲ್ಲಿ ಕೆಲಸ ಮಾಡುವುದೇ ಬೇಡವೆಂದು ಬಿಟ್ಟು ದೂರದ ಪಕ್ಕದ ಹಳ್ಳಿಗೆ ರೂ.60



## ಮಾಹಿತಿಯೇ ಇಲ್ಲ!

**ಖಾ**ನಾಪುರ ತಾಲೂಕಿನ ಸುರಾಪುರ ಎಂಬ ಒಂದು ಗ್ರಾಮ. ಸುನೀತಾ ಎಂಬ ಯುವತಿ, ಬಾಣಂತಿ ಗಂಡನ ಮನೆಯಲ್ಲಿ ಇದ್ದಾಳೆ. ಅತ್ತೆಗೆ ಸೊಸೆಯನ್ನೂ ಆಕೆ ಹೆತ್ತಿರುವ ಮಗುವನ್ನೂ ಕಂಡರಾಗದು. ಸೊಸೆ ಬಂದಾಕ್ಷಣ ಮಗನನ್ನಂತೂ ದೂರದ ಊರಿಗೆ ದುಡಿಯಲು ಸಾಗಹಾಕಿದ್ದಾಳೆ. 'ಇಲ್ಲಿ ನಿತ್ಯ ಕೂಲಿ ಮಾಡಿ ತಂದರೇನೇ ಬದುಕು' ಎಂದು ಸೊಸೆಗೆ ತಿವಿದಿದ್ದಾಳೆ. ಹಸಿ ಹಸಿ ಬಾಣಂತಿ ಮಗುವನ್ನು ಮನೆಯಲ್ಲಿ ಬಿಟ್ಟು ದುಡಿಯಲು ಕೆಲಸ ಹುಡುಕಿಕೊಂಡು ಹೋಗಬೇಕು. ಸಂಜೆ ಆಕೆ ತಿರುಗಿ ಬರುವವರೆಗೂ ಅತ್ತೆ ಮಗುವನ್ನು ಎತ್ತುವುದೂ ಇಲ್ಲ, ಅದಕ್ಕೆ ಹೊಟ್ಟೆಗೆ ಹಾಕುವುದೂ ಇಲ್ಲ. ಅತ್ತು ಅತ್ತು ಬಳಲಿ ಬೆಂಡಾಗಿ ಇನ್ನು ಅಳಲು ಶಕ್ತಿಯೂ ಇಲ್ಲದೆ ಮಗು ಅಲ್ಲೇ ನಿದ್ದೆಗೆ ಜಾರಿರುತ್ತದೆ. ಸಂಜೆ ತಾಯಿ ಕೆಲಸದಿಂದ ಮರಳಿದಾಗಲೇ ಅದಕ್ಕೆ ಹೊಟ್ಟೆಗೆ ಹಾಲು, ನೀರು. ಕ್ರೌರ್ಯದ ಪರಮಾವಧಿ ಅದಾಗಿತ್ತು. ಮಗು ಮಲಗಿದಲ್ಲಿಯೇ ಮುರುಟತೊಡಗಿತ್ತು. ಕಡೆಗೆ ಸುನೀತಾಳ ತವರು ಮನೆಯವರಿಗೆ ಸುದ್ದಿ ತಿಳಿದು ಅವರು ಬಂದು ತಾಯಿ ಮಗು ಇಬ್ಬರನ್ನೂ ಆ ಮನೆಯಿಂದ ಬಚಾವು ಮಾಡಿದರು. ಈ ಸುನಿತಾಗೆ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಸಂಪೂರ್ಣ ಪ್ರಯೋಜನ ಸಿಗಬೇಕಿತ್ತು, ಸಿಗಲಿಲ್ಲ. ಕಡೆಗೆ ದುಡಿಯಲೇಬೇಕಾಗಿ ಬಂದಂಥ ಸ್ಥಿತಿಯಲ್ಲಿ ಉದ್ಯೋಗ ಖಾತ್ರಿಯಾದರೂ ಆಕೆಯ ನೆರವಿಗೆ ಬಂತೇ? ಅದರಲ್ಲಿ ಮಹಿಳೆಯರಿಗಾಗಿ ಇರುವ ಸೌಲಭ್ಯದ ಬಗ್ಗೆ ಏನಾದರೂ ಗೊತ್ತಿತ್ತೇ? ಗೊತ್ತಿದ್ದಿದ್ದರೆ ಆಕೆ ಅಂಥ ದೀನ ಸ್ಥಿತಿಗೆ ಮಗುವನ್ನು ಬಿಟ್ಟು ಹೊರಗಡೆ ಕೆಲಸ ಹುಡುಕಿಕೊಂಡು ಹೋಗುತ್ತಿದ್ದಳೇ? ಬಹುಶಃ ಇಲ್ಲ. ಕಾಯಿದೆಯ ಮಾಹಿತಿ ಆಕೆಗೆ ಇರಬೇಕಾಗಿತ್ತು. ಜನರಿಗೆ ಸರಿಯಾದ ಮಾಹಿತಿ ಕೊಡುವುದು ಮತ್ತು ಮಾಹಿತಿಯ ಸುತ್ತ ಜನರನ್ನು ಸಂಘಟಿಸುವುದು ಕಾಯಿದೆಯನ್ನು ತಂದ ಸರಕಾರದ ಜವಾಬ್ದಾರಿಯಾಗಿರಲಿಲ್ಲವೇ?

ಉದ್ಯೋಗ ಖಾತರಿ ಜಾರಿಯಲ್ಲಿ ಬಂದಿರುವುದು ಜನರಿಗೆ ಗೊತ್ತಿತ್ತು. ಆದರೆ ಒಬ್ಬೊಬ್ಬರು ಮಾತ್ರ ಕೆಲಸ ಕೇಳಲಿಕ್ಕೆ ಈ ಯೋಜನೆಯಲ್ಲಿ ಆಸ್ಪದವಿಲ್ಲ. ಬದಲಿಗೆ ಹತ್ತಾರು ಜನರು ಗುಂಪಾಗಿ ಅರ್ಜಿ ಹಾಕಿ ಕೆಲಸವನ್ನು ಕೇಳಬೇಕು. ಕಾನೂನಿನ ಸರಿಯಾದ ಮಾಹಿತಿಯ ಜೊತೆಗೆ ಸಂಘಟನೆಯೂ ಕೂಡ ಆಗಬೇಕಾಗಿದ್ದು ಈ ಕಾನೂನಿನ ಒಂದು ಅತ್ಯವಶ್ಯಕ ಅಂಶ.

ನಂತೆ ಕೂಲಿ ಮಾಡಲು ನಡೆದು ಹೊರಟರು. ಸಮಾನ ಕೂಲಿ ಇರಲಿ, ಹೆಚ್ಚು ಕೂಲಿ ಇರಲಿ, ಇಂಥ ಯಾವುದೇ ವಿಚಾರವಿರಲಿ, ಚಿಕ್ಕ ಬದಲಾವಣೆ ಆಗಬೇಕೆಂದರೂ ಸತತ ಸಂಘಟಿತ ಪ್ರಯತ್ನ ಅತಿ ಅವಶ್ಯ. ಸಾಕಷ್ಟು ತರಬೇತಿಯ ಜೊತೆಗೆ ಮಹಿಳೆಯರಲ್ಲಿ ಎದೆಗಾರಿಕೆ ತುಂಬುವ ಪ್ರಯತ್ನವೂ ಅತ್ಯಂತ ದಿಟ್ಟವಾಗಿ ನಡೆಯಬೇಕು. ಇಲ್ಲವೆಂದರೆ ಸಂಘಟಿತ ಹೋರಾಟವೂ ವಿಫಲವಾಗುತ್ತದೆ, ಅರದೋಟಾಗುತ್ತದೆ. ಬಹುಶಃ ಹಂದೂರಿನಲ್ಲಿ ಆದದ್ದು ಅದು. ವಿಠ್ಠಲ ಸಾಹುಕಾರ ಮತ್ತವನ ಗೆಳೆಯರನ್ನು ಎದುರಿಸಲು ಕೂಲಿಕಾರ ಮಹಿಳೆಯರಿಗೆ ಬಹಳ ಗಟ್ಟಿಯಾದ ಮುಂದಾಳತ್ವದ ತರಬೇತಿ ಆಗಬೇಕಿತ್ತು. ಸಾಹುಕಾರನನ್ನು ಎದುರಿಸಿ ಕೆಲಸ ಮುಂದುವರೆಸಲು ಅವರಿಗೆ ಸಾಧ್ಯವಾಗಲಿಲ್ಲ. ಕೆಲವೇ ತಿಂಗಳ ಹಿಂದೆ ತಮ್ಮೂರಲ್ಲಿ ಮತ್ತು ಪಕ್ಕದ ಗುಂಡೇನಟ್ಟಿಯಲ್ಲಿ ನಡೆದ ಘಟನೆಯ ಕರಿನೆರಳು, ಕಹಿನೆನಪು ಕೂಡ ಅದಕ್ಕೆ ಕಾರಣವಾಗಿರಬೇಕು.

**ಗುಂಡೇನಟ್ಟಿಯಲ್ಲಿ ಆದದ್ದೇನು?**

ಖಾನಾಪುರದ ಯಾವುದೇ ಗ್ರಾಮದ ಜನರು, ಯಾವೊಂದು ಸೌಲಭ್ಯವನ್ನು ಕೇಳಲು ಪಂಚಾಯತಿಗೆ ಹೋದರೂ, 'ನೀವು ಮೊದಲು ಮನೆ ಕರ ತುಂಬಿರಿ ಆ ನಂತರ ನಿಮ್ಮ ಬೇಡಿಕೆ ಇಡಿರಿ' ಎಂಬುದು ಪಂಚಾಯತಿಯಲ್ಲಿ ಸರ್ವೇಸಾಮಾನ್ಯ ಉತ್ತರ. ಸ್ವಯಂ ಘೋಷಿತ ಆಸ್ತಿ ಕರ ತುಂಬುವ ಪದ್ಧತಿಯಲ್ಲಿ ಚಿಕ್ಕ ಚಿಕ್ಕ ಮನೆಗಳ ಆಸ್ತಿ ತೆರಿಗೆಯೂ ಕೂಡ ನೂರಕ್ಕೆ ಸಾವಿರದಷ್ಟು ಹೆಚ್ಚಾಗಿತ್ತು. 50 ರೂಪಾಯಿ ಇದ್ದುದು 500 ರೂಪಾಯಿ ಆಗಿತ್ತು. ತಮ್ಮ ಮನೆಯ ಕರವನ್ನು ಜನರು ಸ್ವಯಂ ಘೋಷಿಸುವ ಬದಲು ಪಂಚಾಯತಿಯವರು ಮನಬಂದಂತೆ ಘೋಷಿಸುತ್ತಿದ್ದರು. ಆಸ್ತಿ ಕರ ತುಂಬುವುದನ್ನು ಜನರೂ ಬಿಟ್ಟೇ ಬಿಟ್ಟರು. ಮೂರ್ನಾಲ್ಕು ವರ್ಷಗಳ ಕಾಲ ಬಿಟ್ಟದ್ದು ಇದೀಗ ಅದು ಸಾವಿರಗಟ್ಟಲೆ ಆಗಿ ಕುಳಿತಿತ್ತು. ರಾಜ್ಯದ ಬೇರೆ ಕಡೆಗಳಲ್ಲೇನೂ ಆಸ್ತಿ ಕರ ಇಷ್ಟು ಏರಿಕೆ ಆಗಿಲ್ಲವೆಂಬುದನ್ನು ಖಚಿತ ಪಡಿಸಿಕೊಂಡೇ ಮಹಿಳೆಯರು ಹೋರಾಟಕ್ಕಿಳಿದರು. ತಾಲೂಕಾ ಪಂಚಾಯತಿಗೆ ಮುತ್ತಿಗೆ ಹಾಕಿದರು. ಮನೆಕರವನ್ನು ಇಷ್ಟೊಂದು ಪ್ರಮಾಣದಲ್ಲಿ ಏರಿಸಿದ್ದಕ್ಕೆ ಆಧಾರವೇನು ಎಂದು ಪ್ರಶ್ನೆ ಮಾಡಿದರು. ಕಚೇರಿಯ ಬಾಗಿಲಿಗೆ ಮಹಿಳೆಯರ ದಂಡು ಬಂದಾಗ ಏನಾದರೂ ಸಮಜಾಯಿಷಿ ಕೊಟ್ಟು ಕಳಿಸುವುದು ಅಧಿಕಾರಿಗಳಿಗೆ ಕರಗತ. ಎಲ್ಲಾ ಸರಿ ಮಾಡುತ್ತೇವೆಂದು ಹೇಳಿ ಮಹಿಳೆಯರನ್ನು ಹೇಗೋ ಸಾಗಹಾಕಿದ ಅಧಿಕಾರಿಗಳು ಆಯಾ ಪಂಚಾಯಿತಿಗಳಿಗೆ ಹೆಣ್ಣುಮಕ್ಕಳು ಘೋಷಣೆ ಕೂಗುತ್ತ ಬಂದಿದ್ದ ಸುದ್ದಿ ಮುಟ್ಟಿಸಿದರು. ಊರಿನ ಹಿರಿಯರ ಕಿವಿ ಚುಚ್ಚಿದರು. ಗುಂಡೇನಟ್ಟಿಯಲ್ಲಿ 'ಅಭಿವೃದ್ಧಿ ಪರಿಶೀಲನಾ ಸಭೆ' ಎಂದು ಎಲ್ಲರನ್ನೂ ಕೂಡಿಸಿದ ಅಧಿಕಾರಿಗಳು ಹೋರಾಟದಲ್ಲಿ ಮುಂದಾಳತ್ವ ವಹಿಸಿದ್ದ ಮಹಿಳೆಯರಿಗೆ ಬಾಯಿಗೆ ಬಂದಂತೆ ಬಯ್ಯಲಿಕ್ಕೆ ಸಭೆಯನ್ನು ಬಳಸಿಕೊಂಡರು. ನಾಲ್ಕಾರು ಗಂಡಸರಿಗೆ ಕುಡಿಸಿ ಸಭೆಯಲ್ಲಿ ಅಲ್ಲಲ್ಲಿ ಛೂ ಬಿಟ್ಟು ಹೆಣ್ಣುಮಕ್ಕಳಿಗೆ ಹಿರೇತನ ಕೊಟ್ಟವರಾರೆಂದು ಬಯ್ದು ಛೀಮಾರಿ ಹಾಕಿದರು. ಹಂದೂರಿನಲ್ಲಂತೂ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದ ಸಿದ್ದಮ್ಮನ ಗಂಡನೇ ಮಹಾ ಕುಡುಕ, ಕುಡುಕರ ಮುಂದಾಳು. ಹೆಂಡತಿಯನ್ನು ಬೀದಿ ತುಂಬ ಅಟ್ಟಾಡಿಸಿಕೊಂಡು ಹೊಡೆದು ಬಡಿದು ರಾತ್ರಿ ಹೊತ್ತು ಮನೆಯಿಂದ ಹೊರಹಾಕಿದ. ಸಂಘದ ಮಹಿಳೆಯರೇ ಆಕೆಗೆ ರಕ್ಷಣೆ ಕೊಡಬೇಕಾಯ್ತು. ಸ್ವಸಹಾಯ ಸಂಘವೆಂದರೆ ಬರಿಯ ಹಣ ಕೂಡಿಡುವುದು, ಸಾಲ ತೆಗೆದುಕೊಳ್ಳುವುದು ಮಾತ್ರ ಅಲ್ಲ, ಸಾಮಾಜಿಕ, ರಾಜಕೀಯ ವಿಚಾರಗಳನ್ನೂ ತಿಳಿದು ಕೊಳ್ಳುವುದಿರುತ್ತದೆ, ತಮ್ಮ ಬದುಕಿನ ಮೇಲೆ ಪರಿಣಾಮ ಬೀರುವಂಥ ವಿಷಯಗಳ ಬಗ್ಗೆ ಪ್ರಶ್ನೆ ಮಾಡುವುದಿರುತ್ತದೆ ಎಂದು ನಿಧಾನವಾಗಿ ಕಲಿಯುತ್ತಿದ್ದ ಜಾಗೃತ ಮಹಿಳಾ ಒಕ್ಕೂಟಕ್ಕೆ ಈ ಘಟನೆ ಒಂದು ದೊಡ್ಡ ಹಿನ್ನಡೆ. ಅದರ ನೆನಪು ಇನ್ನೂ ಮಾಸುವ ಮೊದಲೇ ಹಂದೂರಿನಲ್ಲಿ ಉದ್ಯೋಗ ಖಾತರಿಗಾಗಿ ಹೋರಾಟ ಆಗಿದ್ದು.

ಗುಂಡೇನಟ್ಟಿಯಲ್ಲಂತೂ ಹೆಣ್ಣುಮಕ್ಕಳು 'ಇನ್ಮುಂದೆ ಯಾವ ಹೋರಾಟಕ್ಕೂ ನಮ್ಮನ್ನು ಮಾತ್ರ ಕರೆಯಬೇಡಿ' ಎಂದು ಹೇಳಿ ಕಳಿಸಿಯೇಬಿಟ್ಟರು. ಮನೆ ಮನೆಗಳಲ್ಲಿ ಗಂಡಂದಿರಿಂದ ಬಯ್ಗಳು, ಕಟ್ಟುಪಾಡು. 'ಹೋರಾಟಗಳಿಗೆ ಹೋಗುವುದಾದರೆ ಮತ್ತೆ ಮನೆಗೆ ಹಿಂದಿರುಗುವ ಅಗತ್ಯವಿಲ್ಲ' ಎಂಬ ತಾಕೀತು ಅವರನ್ನು ಪೂರಾ ಧೈರ್ಯಗುಂದಿಸಿತ್ತು. ಇದೇ ಸಮಯದಲ್ಲಿ ಕೆರವಾಡ ಪಂಚಾಯತಿಯ ಹಿಡಕಲ್‌ನಲ್ಲಿ ಹೆಣ್ಣುಮಕ್ಕಳು ತರಬೇತಿ ಪಡೆದು ಉದ್ಯೋಗಕ್ಕಾಗಿ ಅರ್ಜಿಗಳನ್ನು ಹಾಕುತ್ತಿರುವುದನ್ನು ನೋಡಿದ ಗುಂಡೇನಟ್ಟಿ ಊರ ಹಿರಿಯರು ತಮ್ಮ ಮಹಿಳೆಯರೂ ಕೆಲಸ ಕೇಳಲು ಮುಂದಾಗ ಬಹುದೆಂದು ಹೆದರಿ, ಒಂದು ಸಭೆಯನ್ನು ತುರ್ತಾಗಿ ಕರೆದೂ ಬಿಟ್ಟರು. 'ಉದ್ಯೋಗ ಖಾತರಿಯಲ್ಲಿ ಸಾಕಷ್ಟು ಹಣ ನಮ್ಮೂರಿಗಾಗಿ ಬಂದಿದೆ, ಆ ಹಣದಲ್ಲಿ ಊರಿನ ಎಲ್ಲ ರಸ್ತೆಗಳನ್ನೂ, ಗಟಾರಗಳನ್ನೂ, ಗುಡಿಗಳನ್ನೂ ಕಟ್ಟಿಸುವ ನಿರ್ಧಾರ ಮಾಡಿರುವುದಾಗಿ, ಎಲ್ಲರೂ ಅದಕ್ಕೆ ಸಹಕರಿಸ ಬೇಕೆಂದು ಫರ್ಮಾನು ಹೊರಡಿಸಿದರು. ತಮ್ಮ ಹಕ್ಕು ಪಡೆದುಕೊಳ್ಳಲು ಮಹಿಳೆಯರನ್ನು ತಯಾರು ಮಾಡುವುದು ಖಂಡಿತ ಸುಲಭವಲ್ಲ. ತಮ್ಮತನವನ್ನವರು ಮೊದಲು ಗುರುತಿಸಿಕೊಳ್ಳಬೇಕು. ತಮ್ಮ ಹಕ್ಕನ್ನು ಪಡೆಯಲು ಅಡ್ಡ ನಿಂತಿರುವ ಹಿತಶತ್ರು ಯಾರು ಯಾರೆಂಬುದನ್ನು ಗುರುತಿಸಬೇಕು. ನಂತರ ಅವರನ್ನು ಸರಿಸಿ ತನ್ನದಾದುದನ್ನು ಪಡೆದುಕೊಳ್ಳಲು ಎದ್ದು ನಿಲ್ಲಬೇಕು. ತನ್ನ ಹೋರಾಟ ತನ್ನ ಗಂಡ, ಮಾವ, ಅಥವಾ ಗಂಡಸಾದ ಸೆಕ್ರೆಟರಿಯ ವಿರುದ್ಧವಲ್ಲ, ಬದಲಿಗೆ ಪುರುಷ ಪ್ರಧಾನ ಮೌಲ್ಯದ ವಿರುದ್ಧ ಎಂಬುದನ್ನು ತಾನು ಮೊದಲು ಅರಿತುಕೊಂಡು ಬೇರೆಯವರಿಗೂ ತಿಳಿಸಿದಾಗಲೂ ಕೂಡಾ ಆಕೆಯ ಹಾದಿ ಸುಗಮವಿರುವುದಿಲ್ಲ.

ಹಿಡ್ಕಲ್‌ನಲ್ಲಿ ಮಹಿಳೆಯರು ಉದ್ಯೋಗ ಖಾತರಿಗಾಗಿ ಸಂಘಟಿತ ರಾದರಷ್ಟೇ. ಗಂಡಸರಿಗೇನೂ ಈ ಕೆಲಸ ಬೇಕಾಗಿರಲಿಲ್ಲ. ಯಾಕೆಂದರೆ ಕೃಷಿ ಕಾರ್ಯ ಮುಗಿಯುತ್ತಲೇ ಗೌಂಡಿ ಕೆಲಸ ಹುಡುಕಿಕೊಂಡು ಅವರು ಹೊರಟರೆಂದರೆ ದಿನವೊಂದಕ್ಕೆ 74/82/100 ರೂ. ಕ್ಕಿಂತ ಹೆಚ್ಚು ಹಣವನ್ನು ಅವರು ಸಂಪಾದಿಸಿಯೇ ಸಂಪಾದಿಸುತ್ತಾರೆ. ಹೀಗಾಗಿ ಹಿಡಕಲ್ ಗಂಡಸರಂತೂ ಉದ್ಯೋಗ ಖಾತರಿಗೆ ಕಾಸಿನ ಕಿಮ್ಮತ್ತು ಕೊಡಲಿಲ್ಲ. ಕೇವಲ ಹೆಂಗಸರು ಕೆಲಸ ಕೇಳಿ ಹೋದಾಗ, 'ಹೋಗಿ ನಿಮ್ಮ ಗಂಡಂದಿರನ್ನೂ ಕರೆತನ್ನಿ. ಏನು ನೆಲ ಅಗೆಯುವುದು, ಮಣ್ಣು ಎತ್ತಿ ಹಾಕುವುದು ಎಲ್ಲಾ ನೀವೇ ಮಾಡುತ್ತೀರಾ?' ಎಂದು ಹಂಗಿಸಿದರು. ಒಂಟಿ ಹೆಣ್ಣುಮಗಳು, ವಿಧವೆಯರಿಗೆ ಮುದ್ದಾಂ, 'ಗಂಡಸರಿಲ್ಲದೆ ಬಂದಿರೇಕೆ?' ಎಂದು ಹಿಯಾಳಿಸಿದರು. ಉದ್ಯೋಗ ಕೇಳಿ ಹೋದವರು ಅಳುತ್ತ ಬರಬೇಕಾಯ್ತು. ಛಲದಿಂದ ಮುಂದೆ ಹೋದ ಹೆಂಗಸರು ಎರಡು ಅಡಿ ಅಗೆಯುವುದರಲ್ಲಿ ಸೋತು ಹೋದರು. ಅಲ್ಲಿನ ಮಣ್ಣು ಅಷ್ಟು ಕಲ್ಲುಮಯವಾಗಿದ್ದು ಹಾರೆ ಹಾಕಿದರೆ ಅದೇ ಮಣಿಯುವಂತಿತ್ತು. ಎಂಥ ಮಣ್ಣಿಗೆ ಎಷ್ಟು ಉದ್ದಗಲ ಎಂಬುದನ್ನು ತಾನೂ ಸರಿಯಾಗಿ ಓದದೆ, ಹದಿನೆಂಟು ಅಡಿ ಅಗೆಯಿರಿ ಎಂದು ಇಂಜಿನಿಯರ್‌ನ ಪಟ್ಟು. ಹಿಡ್ಕಲ್‌ನ ಬಸಮ್ಮ ಅಂತೂ 'ಬಾರೋ ಮಹಾ ವೀರ. ನೀನೇ ಅರ್ಧ ಪೂಟು ಹಡ್ಡಿ ತೋರಿಸು. ನಿನ್ನ ಕೈಲಿ ಆಗುವುದಾದರೆ ಖಂಡಿತ ನಾವೂ ಅಗೆದೇ ಅಗೆಯುತ್ತೇವೆ' ಎಂದು ಸವಾಲು ಹಾಕಿದಾಗ ಉದ್ದ ಅಗಲ ಅಳತೆಗಳನ್ನು ಸೆಕ್ರೆಟರಿ ಕೆಳಕ್ಕಿಳಿಸಿದ.

ಮಣ್ಣು ಸಡಿಲವಾಗಿದ್ದ ಕಡತನ ಬಾಗೇವಾಡಿಯಲ್ಲಿ ರಾಜಶ್ರೀಯ ಜೊತೆಗೆ ಹೆಣ್ಣುಮಕ್ಕಳು ಕೇಳಿದಷ್ಟು ಅಗೆದು, ಮಣ್ಣು ಚೆಲ್ಲಿ ಆ ವರ್ಷ ತಮ್ಮ ಪಂಚಾಯತಿಗೆ ಉದ್ಯೋಗ ಖಾತರಿಗೆಂದು ಬಂದಿದ್ದ ಎಲ್ಲಾ

ಹಣವನ್ನೂ ತಾವೇ ಬಳಸಿಕೊಂಡಿದ್ದು ದೊಡ್ಡ ಸುದ್ದಿಯಾಯ್ತು. ವಿಶೇಷವೆಂದರೆ ಎಲ್ಲಿಯೂ, ಯಾವ ಹಳ್ಳಿಯಲ್ಲಿಯೂ ಮಹಿಳೆಗೆ ಸಮಾನ ವೇತನ ಎಂಬ ವಿಚಾರ ಮುಖ್ಯ ಚರ್ಚೆ ಅಥವಾ ವಿಶ್ಲೇಷಣೆಗೊಳಪಡಲೇ ಇಲ್ಲ. ಬದಲಿಗೆ ತಾವು ಗಂಡಸರು ಹೇಗೂ ಇದಕ್ಕಿಂತ ಜಾಸ್ತಿ ಗಳಿಸಿ ತರುವವರು, ಹೆಣ್ಮಕ್ಕಳು ಬೇಕಾದರೆ ಈ ಜುಜುಬಿ ಕೆಲಸ ಮಾಡಿಕೊಳ್ಳಲಿ ಎಂಬ ಅಸಡ್ಡೆ ಎಲ್ಲ ಕಡೆ ವಿಜೃಂಭಿಸಿತ್ತು. ಒಟ್ಟಾರೆಯಾಗಿ ಉದ್ಯೋಗ ಖಾತರಿಯನ್ನು ಜನರು ಅರ್ಥೈಸಿಕೊಂಡಿದ್ದೇ ಬೇರೆಯಾಗಿ. ನೀರು ಹೇಗೆ ಪಾತ್ರೆಯ ಆಕಾರವನ್ನು ಪಡೆದುಕೊಳ್ಳುವುದೋ ಹಾಗೆ ಮಾಹಿತಿ ನೀಡದಿರುವುದು, ಸುಳ್ಳು ಕ್ರಿಯಾ ಯೋಜನೆ ಬರೆಯುವುದು, ಹಣ ಹೊಡೆಯುವುದು, ಮುಂತಾದವುಗಳೇ ಮೌಲ್ಯವಾಗಿ ಹೋಗಿರುವ ಪಂಚಾಯತಿ ವ್ಯವಸ್ಥೆಯಲ್ಲಿ ಜನರ ವೇತನಕ್ಕಾಗಿ ಬಂದಿರುವ ಲಕ್ಷಗಟ್ಟಲೆ ಹಣವನ್ನು ನುಂಗಿ ಹಾಕುವುದು ಹೇಗೆಂದು ಯೋಜನೆ ಹೊಸೆಯುವುದರಲ್ಲಿ ಮಗ್ನವಾಗಿದ್ದ ಅಧಿಕಾರಶಾಹಿ ಮತ್ತು ರಾಜಕೀಯ ಮುಖಂಡರು ಉದ್ಯೋಗ ಕೇಳಿ ಬಂದ ಮುಗ್ಧ ಮಹಿಳೆಯರನ್ನು ಹೀಯಾಳಿಸಿ, ಕಾಡಿ, ವಂಚಿಸಿ ಹಣ ಲಪಟಾಯಿಸುವುದರಲ್ಲಿ ಹೆಚ್ಚು ಸಮಾಧಾನ ಕಂಡುಕೊಂಡರು.

### ಮಾಹಿತಿ ಕೊಡದೆ ಹಣ ಲಪಟಾಯಿಸುವ ಯತ್ನ- ಜುಂಜವಾಡದಲ್ಲಿ ಮಹಿಳೆಯರ ಹೋರಾಟ

ಗೋಲಿಹಳ್ಳಿ, ಜುಂಜವಾಡಗಳು ಖಾನಾಪುರ ತಾಲೂಕಿನ ಕಾಡಿನಂಚಿನಲ್ಲಿ ಬರುವ ಹಳ್ಳಿಗಳು. ಕಳೆದ ವರ್ಷ 2009 ರಲ್ಲಿ ಜುಂಜವಾಡ ಹಳ್ಳಿಗೆಂದು 4.6 ಲಕ್ಷ ರೂಪಾಯಿ ಉದ್ಯೋಗ ಖಾತರಿಗಾಗಿ ಬಂದಿತ್ತು. ಅದರಲ್ಲಿ 60 ಲಕ್ಷವನ್ನು ಹಿರಿಯರಿಗೆ ಕೊಟ್ಟ ಕಾರ್ಯದರ್ಶಿ ಜನರು ಮಾಡಬಹುದಾದ ಎಲ್ಲ ಕೆಲಸಗಳಿಗೆ ಜೆಸಿಬಿ ಬಳಸಲು ಹಿರಿಯರ ಒಪ್ಪಿಗೆ ಪಡೆದ. ಇದೇ ಹಳ್ಳಿಯಲ್ಲಿ ಅರಣ್ಯ ಇಲಾಖೆಯ ರೇಂಜ್ ಆಫೀಸಿದೆ. ಇಲಾಖೆಯವರು ಕೆಲಸಕ್ಕೆ ಕರೆದಾಗ ಜನರು ಕೂಲಿಗೆಂದು ಹೋದರು. ಒಂದು ತಿಂಗಳು ಕೂಲಿ ಕೆಲಸವನ್ನೂ ಮಾಡಿದರು. ಕೂಲಿ ಹಣ ಕೊಡಿರೆಂದು ಕೇಳಿದಾಗಲೇ ಅರಣ್ಯ ಇಲಾಖೆಯವರು ಹೇಳಿದ್ದು, ಇದು ಅರಣ್ಯ ಇಲಾಖೆಯ ಕೆಲಸ ಆಗಿರಲಿಲ್ಲ, ಬದಲಿಗೆ ಉದ್ಯೋಗ ಖಾತರಿಯ ಕೆಲಸವಾಗಿತ್ತು ಎಂದು. ಉದ್ಯೋಗ ಖಾತ್ರಿಯ ಹಣ ಪಡೆಯಲು ಪಂಚಾಯತಿಗೆ ಹೋಗಬೇಕು, ಹೋಗಿ ಎಂದರು. ಪಂಚಾಯತಿಗೆ ಹೋದರೆ ಅರಣ್ಯ ಇಲಾಖೆಗೆ, ಅರಣ್ಯ ಇಲಾಖೆಯ ಕಚೇರಿಗೆ ಹೋದರೆ ಪಂಚಾಯತಿಗೆ ಎಂದು ಅತ್ತಿಂದಿತ್ತ, ಇತ್ತಿಂದತ್ತ ಕಾಲ್ಚೆಂಡಿನಂತೆ ಓಡಿಯಾಡಿಸಿದಾಗ ಈ ಹಣ ನಮಗೆ ಬರೋದಿಲ್ಲ ಎಂದು ಜನರು ನಿರಾಶೆಯಿಂದ ಕೈಚೆಲ್ಲಿ ಕುಳಿತುಬಿಟ್ಟಿದ್ದರು. ಮತ್ತೆ ಅವರನ್ನೆಲ್ಲ ಒಗ್ಗೂಡಿಸಿ ಒಂದು ಪತ್ರವನ್ನು ಬರೆದುಕೊಟ್ಟಾಗ ಪಂಚಾಯತಿ ಕಚೇರಿಗೆ, 'ಹಣ ಕೊಡುತ್ತೀರೋ ಇಲ್ಲವೋ?' ಎಂದು ಮುತ್ತಿಗೆ ಹಾಕಿದರು. ಕೂಲಿ ಕೊಡದಿದ್ದರೆ ಕಚೇರಿಗೆ ಬೀಗವನ್ನೆ ಹಾಕಿಬಿಡುವುದಾಗಿ ಘೋಷಿಸಿದಾಗ ಜನರ ಕೈಯಲ್ಲಿ ಸಿಕ್ಕಿಬಿದ್ದ ಕಾರ್ಯದರ್ಶಿಗೆ ಅಧ್ಯಕ್ಷನತ್ತ ಬೆರಳು ಮಾಡುವುದೊಂದೇ ದಾರಿಯಾಯಿತು. ಅಧ್ಯಕ್ಷ ಊರಲ್ಲಿಲ್ಲ ಎಂದು ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗ ಆತ ಸನಿಹದ ಹೈವೇ ಧಾಬಾದಲ್ಲಿ ಕುಡಿಯುತ್ತ ಕುಳಿತಿರುವನೆಂದು ಗೊತ್ತಾಯಿತು. ಅಧ್ಯಕ್ಷರಿಗೆ ಫೋನು ಮಾಡಿ, 'ಬನ್ನಿ ಸಹಿ ಹಾಕಿ' ಎಂದರೆ ತಾನು ದುಡ್ಡು ಕೊಟ್ಟು ಆರಿಸಿ ಬಂದವ, ತನಗೆ ದುಡ್ಡು ಕೊಡದೆ ಒಂದೂ ಸಹಿ ಮಾಡುವುದಿಲ್ಲ. ಎಂದು ಪಟ್ಟು ಹಿಡಿದ. ಕಡೆಗೆ ಸಿಟ್ಟಿಗೆದ್ದ ಮಹಿಳೆಯರು, ಬಡಿಗೆ, ಚಪ್ಪಲಿ ಸಮೇತ, ಕಾರ್ಯದರ್ಶಿಯನ್ನೂ ದೂಡಿಕೊಂಡು ಧಾಬಾಕ್ಕೇ ನಡೆದರು. 'ಒಳ್ಳೇ ಮಾತಲ್ಲಿ ಸಹಿ ಹಾಕುತ್ತೀಯೋ, ಇಲ್ಲ ಚಪ್ಲಿ ಪೂಜೆ ಮಾಡೋಣವೋ?' ಎಂದು ಸೊಂಟದ ಮೇಲೆ ಕೈಯಿಟ್ಟುಕೊಂಡು ಸವಾಲು ಹಾಕಿದಾಗ ಅಧ್ಯಕ್ಷರ ಕುಡಿದ ಮದವೆಲ್ಲ ಜರ್ರನೆ ಇಳಿತು. ಅಲ್ಲೇ ಚೆಕ್ ತರಿಸಿಕೊಂಡು ಬಾಲ ಮುದುರಿಕೊಂಡು ಸಹಿ ಹಾಕಿ ಕಳಿಸಿದ. ಕಾರ್ಯದರ್ಶಿಯಂತೂ ಇಂಗು ತಿಂದ ಮಂಗನಾಗಿದ್ದ. ಇದನ್ನೂ ಕೂಡ ಮಹಿಳಾ ಸಬಲೀಕರಣ ಎನ್ನಲು ನನ್ನ ಮನಸ್ಸು ಒಪ್ಪುವುದಿಲ್ಲ. ತಮ್ಮೊಳಗಿನ ಸಾಮರ್ಥ್ಯದಿಂದ ಕೂಲಿ ಪಡೆಯುವುದು ಸಾಧ್ಯವಾಯಿತು ಎಂದು ಆ ಮಹಿಳೆಯರಿಗೆ ಮನವರಿಕೆ ಆಯಿತೇ ಇಲ್ಲಿ? ಹಿಂದೆ ಎಂಬತ್ತರ ದಶಕದಲ್ಲಿ ಮಹಿಳಾ ಸ್ವಸಹಾಯ ಸಂಘಗಳು ಶುರುವಾಗಿ ಅವು ಬ್ಯಾಂಕಿಗೆ ಹೋಗಿ ಖಾತೆ ತೆಗೆಯಲು ಮುಂದಾದಾಗ ಬ್ಯಾಂಕುಗಳೂ ಕೂಡ ಮಹಿಳೆಯರನ್ನು ಒಬ್ಬೊಬ್ಬರನ್ನಾಗಿ ಗುರುತಿಸಿರಲಿಲ್ಲ. ಸಾಲ ಕೊಡುವ ಪ್ರಶ್ನೆ ಬಂದಾಗಲಂತೂ ಮಹಿಳೆಗೆ ಸಾಲ ಕೊಡುವುದಕ್ಕೆ ಬರುವುದಿಲ್ಲ ಎಂದು ಬಿಟ್ಟರು. ಯಾಕೆಂದರೆ ಮಹಿಳೆಯರ ಹೆಸರಿನಲ್ಲಿ ಒಂದು ಹಿಡಿ ಭೂಮಿಯೇ? ಆಸ್ತಿಯೇ? ಯಾವ ಆಧಾರದ ಮೇಲೆ ಸಾಲ ಕೊಡಬೇಕು? ಬಹುಶಃ ಆ ಸಮಯದಲ್ಲಿ ಮಹಿಳಾ ಸಂಘಟನೆಯಲ್ಲಿ ತೊಡಗಿದ್ದವರು 'ಹೆಣ್ಣುಮಕ್ಕಳಿಗೇಕೆ ಸಾಲ ಸಿಗುವುದಿಲ್ಲ? ಅವರ ಹೆಸರಲ್ಲಿ ಆಸ್ತಿ ಇಲ್ಲವೇಕೆ?' ಎಂದು ಮೂಲ ಸಮಸ್ಯೆಗೆ ಕೈ ಹಾಕಿದ್ದರೆ ಬಹುಶಃ ಅದು ಒಂದು ಕ್ರಾಂತಿಗೆ ನಾಂದಿ ಹಾಕಿದಂತಾಗುತ್ತಿತ್ತೇನೋ. ಆದರೆ ಮಹಿಳಾ ಸಂಘ ಮಾಡಿದ ಎನ್.ಜಿ.ಓ.ಗಳು ಆ ಧೈರ್ಯ ಮಾಡದೇ, 'ಗುಂಪು ಸಾಲವಾದರೂ ಅಡ್ಡಿಯಿಲ್ಲ ಅದನ್ನೇ ಕೊಡಿ.' ಎಂದು ಗುಂಪು ಸಾಲ ಕೊಡಿಸುವಲ್ಲಿಗೇ ತಮ್ಮ ಹೋರಾಟವನ್ನು ಗುರಿಯಾಗಿಸಿದವು. ಅಷ್ಟನ್ನು ಮಾತ್ರ ಪಡೆಯುವಲ್ಲಿ ಯಶಸ್ವಿಯಾದವು. ಸಂಘಟನೆ ಮಾಡಿಯೂ ಒಂದು ಕ್ರಾಂತಿ ಆಗುವುದನ್ನು ತಡೆದದ್ದರಿಂದ ಮೂಲ ಪ್ರಶ್ನೆಯು ಹಾಗೆಯೇ ಉಳಿದುಕೊಂಡು ಬಿಟ್ಟಿತು. ಮಹಿಳೆಗೆ ವೈಯಕ್ತಿಕವಾಗಿ ಗುರುತಿಸಿಕೊಳ್ಳುವ ಅವಕಾಶವೊಂದು ತಪ್ಪಿಹೋಯಿತು. ಇಂದಿಗೂ ಮಹಿಳೆ ಎಂದರೆ ಮಹಿಳಾ ಗುಂಪು ಎಂದೇ ಆಗುತ್ತದೆ, ಮಹಿಳಾ ಸಬಲೀಕರಣ ಎಂದರೂ ಒಂದು ಗುಂಪು ಸಾಮರ್ಥ್ಯದ ಬಗ್ಗೆ ಮಾತ್ರ ನಾವು ಮಾತನಾಡುತ್ತೇವೆ.

### ಸಬಲೀಕರಣದತ್ತ ಒಂದೊಂದೇ ಹೆಜ್ಜೆ

ಇಷ್ಟಾಗಿಯೂ ಸಿಕ್ಕ ಅವಕಾಶವನ್ನೇ ಬಳಸಿಕೊಂಡು ಬೆಳೆದ ಉದಾಹರಣೆಗಳು ಅಪರೂಪಕ್ಕಾದರೂ ಕಾಣಸಿಗುತ್ತವೆ. ಬೆಳಗಾವಿಯ 'ಪರಿವರ್ತನ' ಸಂಸ್ಥೆ ಕೆಲಸ ಮಾಡುತ್ತಿರುವ ಬಂಬರ್ಗಾ ಪಂಚಾಯತಿಯ ಶಿವಾಪುರದ ದಲಿತ ಹೆಣ್ಣುಮಗಳು ಹೀರಾಬಾಯಿ. ಅಲ್ಲಿನ ಮಹಿಳಾ ಸಂಘಟನೆಯ ಮುಂದಾಳು ಆಕೆ. ಮಾಹಿತಿ ಹಕ್ಕಿನಡಿಯಲ್ಲಿ ಉದ್ಯೋಗ ಖಾತರಿಗೆ ಸಂಬಂಧಪಟ್ಟ ಕೆಲವು ಮಾಹಿತಿಗಳನ್ನು ಪಂಚಾಯತಿಯಲ್ಲಿ ಕೇಳಿ ಪಂಚಾಯತಿಯವರ ಕಣ್ಣುರಿಗೆ ಕಾರಣವಾಗಿದ್ದಳು. ಇವರ ಸಂಘದಲ್ಲಿ ಒಬ್ಬ ಪಂಚಾಯತಿ ಸದಸ್ಯೆಯೂ ಇದ್ದಾಳೆ. ಆ ಸದಸ್ಯೆಯ ಗಂಡನ ಮೂಲಕ ಹೀರಾಬಾಯಿಗೆ ಒತ್ತಡ. ಬೆದರಿಕೆ ಬಂದರೂ ಕೂಡ ಆಕೆ ಬಗ್ಗಲಿಲ್ಲ. ಪಂಚಾಯತಿಯಲ್ಲಿ ಕೆಲಸ ಕೇಳಿದರೆ ಕೆಲಸ ಕೊಡಲಿಲ್ಲ. ಕಡೆಗೆ ಸಂಘದವರೆಲ್ಲ ಸೇರಿ ನಿರುದ್ಯೋಗ ಭತ್ಯೆಗೆ ಅರ್ಜಿ ಹಾಕಿದರು. ಮಹಿಳೆಯರು, ದಲಿತರು, ಶೋಷಿತರು ಸಂಘಟಿತರಾದಾಗ ಪುರುಷರು, ಪಟ್ಟಭದ್ರರು ಅವರನ್ನು ತುಳಿಯಲು, ದನಿ ಅಡಗಿಸಲು, ಪ್ರಶ್ನೆ ಕೇಳದಂತೆ ಮಾಡಲು ಅದೆಷ್ಟು ಉಪಾಯಗಳನ್ನು ಹುಡುಕುತ್ತಾರೆ ಎನ್ನಲು ಇದಕ್ಕಿಂತ ಉತ್ತಮ ಉದಾಹರಣೆ ಸಿಗಲಿಕ್ಕಿಲ್ಲ. ಒಂದು ದಿನ ಹೀರಾಬಾಯಿಯನ್ನು ಪಂಚಾಯತಿಗೆ ಕರೆಸಲಾಯ್ತು. 'ನೀವೆಲ್ಲ ಕೆಲಸ ಕೇಳಿದ್ದೀರಲ್ಲ, ಕೊಡ್ತೀವಿ'. ಕೆಲಸಕ್ಕೆ ಬರ್ತೀನಿ ಎಂದು ಬರೆದಿರುವ ಈ ಪತ್ರಕ್ಕೆ ಸಹಿ ಹಾಕು' ಎಂದು ಆಕೆಗೆ ಹೇಳಿ ಸಹಿ ಹಾಕಿಸಿಕೊಂಡರು. ತಾನು ಸಹಿ ಹಾಕಿ ಬಂದೆ ಎಂದು ಹೀರಾಬಾಯಿ ಮುಗ್ಧತನದಿಂದ ಹೇಳುತ್ತಾಳೆ. ಕೆಲಸಕ್ಕೆ ಕರೆದಾಗ ತಮಗೆ ಬರಲಿಕ್ಕೆ ಆಗಲಿಲ್ಲ ಎಂದು ಬರೆದ ಪತ್ರ ಅದಾಗಿತ್ತೆಂಬುದು ಆಕೆಗೆ ಗೊತ್ತಾಗುವ ವೇಳೆಗೆ ಸಮಯ ಮಿಂಚಿತ್ತು.

**ಗ್ರಾಮ ಸಭೆಯಲ್ಲಿ ಪ್ರವೇಶಿಸುವ ಪ್ರಯತ್ನ–ಮಂಗೇನಕೊಪ್ಪ**

ಉದ್ಯೋಗ ಖಾತರಿಯ ಕೆಲಸಗಳು, ಸರಕಾರಿ ಯೋಜನೆಗಳು ಎಲ್ಲವೂ ಗ್ರಾಮ ಸಭೆಯ ಮೂಲಕವೇ ತೀರ್ಮಾನ ಆಗಬೇಕೆಂದು ಜನರಿಗೆ ಅರಿವು ಮೂಡಿಸುವ ಪ್ರಯತ್ನ ಅಲ್ಲಲ್ಲಿ ನಡೆದೇ ಇದೆ. ಆದರೆ ಸಾಮಾನ್ಯವಾಗಿ ಗ್ರಾಮ ಸಭೆಯಲ್ಲಿ ಮಹಿಳೆಯರಿಗೆ ಪ್ರವೇಶವೆಲ್ಲಿ? ಮಂಗೇನಕೊಪ್ಪ ಗ್ರಾಮದಲ್ಲಿ ಈ ವರ್ಷ ಗ್ರಾಮ ಸಭೆಯಲ್ಲಿ ತಾವು ಭಾಗವಹಿಸಲೇಬೇಕೆಂದು ಮಹಿಳೆಯರು ತೀರ್ಮಾನಿಸಿದರು. ಅದಕ್ಕೆ ಪೂರ್ವ ತಯಾರಿಯಾಗಿ ಪಂಚಾಯತಿಯ ಕಾರ್ಯದರ್ಶಿಯನ್ನು ಮಹಿಳೆಯರ ಗೊಂಚಲು ಸಂಘದ ಸಭೆಗೇ ಕರೆದು ಆತನೊಂದಿಗೂ ಚರ್ಚಿಸಲಾಯ್ತು. ಯಾವ ಯಾವ ಯೋಜನೆಗಳು ಬಂದಿವೆ, ಕುಡಿಯುವ ನೀರು, ರಸ್ತೆ, ಊರಲ್ಲಿಯ ಉದ್ಯೋಗ ಖಾತರಿ ಕೆಲಸ ಇವೆಲ್ಲವೂ ಗ್ರಾಮ ಸಭೆಯಲ್ಲಲ್ಲದೆ ಬೇರೆಲ್ಲೂ ತೀರ್ಮಾನವಾಗ ಕೂಡದೆಂದು ಹೆಂಗಸರು ಕಾರ್ಯದರ್ಶಿಗೆ ಮನದಟ್ಟು ಮಾಡಿದರು.

ಅಂತೆಯೇ ಗ್ರಾಮ ಸಭೆಗೆ ಮಹಿಳೆಯರೆಲ್ಲ ಬಿಡುವು ಮಾಡಿಕೊಂಡು ಹೋದರು ಕೂಡ. ಗಂಡಸರ, ಊರ ಹಿರಿಯರ ಹುಬ್ಬು ಮೇಲಕ್ಕೇರಿತು. 'ಯಾಕ್ರೆವ್ವಾ, ಇಲ್ಲಿ ಬಂದ್ರಿ? ಇಲ್ಲೇನು ಕೆಲಸ ನಿಮಗ? ಚಂದಾಗಿ ಮನೀ ಬಾಳೆ ಮಾಡ್ ಹೋಗ್ರಿ. ಊರ ಉಸಾಬರಿ ನಾವು ಹಿರೇರು ನೋಡ್ಕೋತೀವಿ. ಮಹಿಳೆಯರು ಅಪಮಾನ ಸಹಿಸಿ ಅಲ್ಲಿಯೇ ನಿಂತರು. ಅವರಿಗೆ ಬೆಂಬಲವಾಗಿ ಕೆಲವು ಯುವಕರೂ ನಿಂತು ಮಾತನಾಡಿದರು. ನೀರಿನ ಸರಬರಾಜಿನ ವಿಚಾರ, ಮನೆಗಳ ಹಂಚಿಕೆ, ಅಂಗವಿಕಲರಿಗೆ ಸೌಲಭ್ಯದ ವಿಚಾರ ಎಲ್ಲವನ್ನೂ ತಾವೂ ಭಾಗವಹಿಸಿ ಮಾತನಾಡಿದರು. ಕಡೆಗೆ ಉದ್ಯೋಗ ಖಾತರಿಯ ವಿಚಾರ ಬಂದಾಗ, ಗ್ರಾಮದ ಸುತ್ತ ಮುತ್ತ ಯಾವ ಯಾವ ಕೆರೆಗಳ ಹೂಳೆತ್ತುವ ಕೆಲಸವನ್ನು ಆದ್ಯತೆಯಾಗಿ ತೆಗೆದುಕೊಳ್ಳಬೇಕೆನ್ನುವುದನ್ನೂ ಹೇಳಿದಾಗ ಹಿರಿಯರ ಏರಿದ್ದ ಹುಬ್ಬು ಅಲ್ಲೇ ಸಿಕ್ಕಿಹಾಕಿಕೊಂಡು ಗಂಟಾಗಿಬಿಟ್ಟಿತು. ಗದ್ದಲ ಮಾಡಲೆಂದೇ ಕುಡಿದು ಬಂದಿದ್ದ ಕುಡುಕರನ್ನು ಯುವಕರು ನಿಭಾಯಿಸಿದ್ದರಿಂದ ಸಭೆಯಲ್ಲಿ ಗದ್ದಲವೇ ಆಗಲಿಲ್ಲ! ತಮ್ಮ ಜೀವನದಲ್ಲಿ ಮೊಟ್ಟ ಮೊದಲ ಬಾರಿಗೆ ಊರಿನ ಅಭಿವೃದ್ಧಿಯಲ್ಲಿ ಮಹಿಳೆಯರು ತಮ್ಮ ಪಾತ್ರವನ್ನು ನಿಭಾಯಿಸಿದ್ದರು. ತಮ್ಮ ಜೀವನದಲ್ಲಿ ಮೊಟ್ಟ ಮೊದಲ ಬಾರಿಗೆ ಹಿರಿಯರು ಊರ ಅಭಿವೃದ್ಧಿಯ ನಿರ್ಧಾರಗಳಲ್ಲಿ ಮಹಿಳೆಯೂ ಪಾಲ್ಗೊಳ್ಳಬಹುದೆಂಬುದನ್ನು ಕಣ್ಣಾರೆ ಕಂಡಿದ್ದರು. ಇಬ್ಬರದ್ದೂ ಸಬಲೀಕರಣದ ಪ್ರಯತ್ನ ಅಲ್ಲಿ ಸಾಕಾರವಾಗಿತ್ತು. ಮಹಿಳಾ ಸಬಲೀಕರಣದ ಪ್ರಯತ್ನದಲ್ಲಿ ಕೇವಲ ಹೆಣ್ಣುಮಕ್ಕಳಷ್ಟನ್ನೇ ಕರೆದುಕೊಂಡು ಹೊರಟರೆ, ದಾರಿಯಲ್ಲೆಲ್ಲಾ ಮುಳ್ಳುಗಳೇ. ಹಿಂದಿನ ಕಂದಾಚಾರವನ್ನು ನಂಬಿರುವ ಹಳೆಯ ಮೌಲ್ಯಗಳನ್ನು ಬಿಡದ ಹಿರಿಯರಿಲ್ಲದಿದ್ದರೆ ಇಲ್ಲ, ಹೊಸ ವಿಚಾರಗಳನ್ನು ಒಪ್ಪುವ ಯುವಕರನ್ನಾದರೂ ಜೊತೆಯಲ್ಲಿ ಕರೆದುಕೊಂಡರೆ ಅಲ್ಪ ಸ್ವಲ್ಪ ಸಫಲತೆಯನ್ನಾದರೂ ಪಡೆಯಬಹುದು.

**ಮಹಿಳಾ ಸಶಕ್ತೀಕರಣ– ಹಿಡ್ಕಲ್ಲಿನ ಮಹಾನಂದಾ**

ಹಿಡಕಲ್ಲಿನಲ್ಲಿ ಗಟ್ಟಿಮಣ್ಣಿನ ನೆಲವನ್ನು ಅಗೆದಗೆದು ಸೋತು ಕೈಚೆಲ್ಲಿದ್ದರು ಮಹಿಳೆಯರು. 'ನಿಮ್ಮ ಊರಿಗೆ ಗಟಾರು ಬೇಕೋ, ಬೇಡವೋ' ಎಂದು ಜಬರು ಮಾಡಿ ಕಾರ್ಯದರ್ಶಿ ಹೆಣ್ಣುಮಕ್ಕಳಿಂದ ಚೆಕ್ಕಿಗೆ ಸಹಿ ಪಡೆದು ಹೋಗಿದ್ದ. ಒಂದು ಸಹಿಗೆ ನೂರು ರೂಪಾಯಿ ಎಂಬ ಗುಲ್ಲು ಎಲ್ಲ ಕಡೆಗೆ ಹಬ್ಬಿತ್ತು. ಮಹಾನಂದಾ ಈ ಗ್ರಾಮದ ಯುವತಿ. ಉದ್ಯೋಗ ಖಾತರಿ, ಮಾಹಿತಿ ಹಕ್ಕಿನ ತರಬೇತಿಗಳಲ್ಲಿ ಭಾಗವಹಿಸಿದವಳಿಗೆ ತಾನು ಒಂದಾದರೂ ಪ್ರಯೋಗ ಮಾಡಿ ನೋಡಬೇಕೆಂಬ ಹಂಬಲ. ಊರಿನ ಯುವಕ ಸಂಘ ಚಟುವಟಿಕೆಯಲ್ಲಿತ್ತು. ಅವರಿಗೂ ಮಾಹಿತಿ ಹಕ್ಕಿನ ತರಬೇತಿ ಆಗಿತ್ತು. ಮಹಾನಂದಾ ಮತ್ತು ಆಕೆಯ ಗಂಡ ಇಬ್ಬರೂ ಈ ಊರಲ್ಲಿ ಉದ್ಯೋಗ ಖಾತರಿಗೆ ಎಷ್ಟು ಖರ್ಚಾಗಿದೆ ಎಂದು ಕೇಳಿ ಕೆರವಾಡ ಪಂಚಾಯತಿಗೆ ಅರ್ಜಿ ಕೊಟ್ಟರು, ಉತ್ತರ ಬರಲಿಲ್ಲ. ಊರಲ್ಲಿ ಇರುವ ಮೂರು ದೇವಸ್ಥಾನಗಳಲ್ಲೂ ಸಿಮೆಂಟು ಒರೆಸುವ ಕೆಲಸ ಉದ್ಯೋಗ ಖಾತರಿಯ ಹೆಸರಲ್ಲಿ ನಡೆದಿತ್ತು. ಸಾಕಷ್ಟು ಜನರು ಅದರಲ್ಲಿ ಕೆಲಸ ಮಾಡುತ್ತಿದ್ದರು. ಆ ಕೆಲಸವೆಲ್ಲ ನಿಂತುಹೋಯಿತು. ಯಾಕೆಂದು ಜನ ಕೇಳಿದಾಗ ಮಹಾನಂದಾ ಮತ್ತು ಆಕೆಯ ಗಂಡ ಮಾಹಿತಿ ಹಕ್ಕಿನ ಅಡಿ ಕೆಲಸ ನಿಲ್ಲಿಸಬೇಕೆಂದು ಅರ್ಜಿ ಕೊಟ್ಟಿದ್ದಾರೆಂದು ಪಂಚಾಯತಿ ಅಧ್ಯಕ್ಷ ಬಂದು ಹೇಳಿದ. ಸಹಜವಾಗಿಯೇ ಕೂಲಿಕಾರರಿಗೆ ಸಿಟ್ಟು ಬಂತು. ಎಲ್ಲರೂ ಸೇರಿ ಮಹಾನಂದಾಳನ್ನು ಕರೆಸಿದರು. ಕೆಲಸ ನಿಲ್ಲಿಸೆಂದು ಅರ್ಜಿ ಕೊಟ್ಟಿರುವ ಕಾರಣವೇನು ಎಂದು ಎಲ್ಲರೂ ಸುತ್ತುವರೆದು ಕೇಳಿದರು. ಮಹಾನಂದಾ ಕಿಂಚಿತ್ತೂ ಹೆದರಲಿಲ್ಲ.

'ನಾವು ಮಾಹಿತಿ ಕೇಳಿದ್ದು ಉದ್ಯೋಗ ಖಾತರಿಯಲ್ಲಿ ಈ ಊರಲ್ಲಿ ಎಷ್ಟು ಖರ್ಚಾಯಿತು ಎಂದು, ಅದಕ್ಕೂ ಕೆಲಸ ನಿಲ್ಲಿಸುವುದಕ್ಕೂ ಏನು ಸಂಬಂಧ? ತಾನು ಕೇಳಿದ್ದು ಕಾರ್ಯದರ್ಶಿಗೆ. ಪಂಚಾಯತಿ ಅಧ್ಯಕ್ಷರಿಗೆ ಇದು ಸಂಬಂಧ ಬರುವುದೇ ಇಲ್ಲ. ಹಾಗಿರುವಾಗ ಅಧ್ಯಕ್ಷರು ಕೆಲಸ ನಿಲ್ಲಿಸಿದ್ದೇಕೆ ಮತ್ತು ಅದರ ಜವಾಬ್ದಾರಿಯನ್ನು ತನ್ನ ಮೇಲೆ ಹೊರೆಸುವುದೇಕೆ?' ಎಂದು ದಿಟ್ಟವಾಗಿ ಪ್ರಶ್ನಿಸಿದಳು. ಕೆಲಸ ನಿಲ್ಲಿಸಿರುವುದಕ್ಕೂ, ಮಾಹಿತಿ ಕೇಳಿದ್ದಕ್ಕೂ ಏನೇನೂ ಸಂಬಂಧವಿಲ್ಲ. ತಾನು ತನ್ನ ಅರ್ಜಿಯನ್ನು ಯಾವ ಕಾರಣಕ್ಕೂ ಹಿಂತೆಗೆದುಕೊಳ್ಳುವುದಿಲ್ಲ ಎಂದು ದೃಢವಾಗಿ ಹೇಳಿದಾಗ ಕೂಲಿಗಳೇ ಅಧ್ಯಕ್ಷರಿಗೆ ತಿರುಗಿ ಬಿದ್ದರು. ತನ್ನ ಬೇಳೆ ಏನೂ ಬೇಯದಿದ್ದಾಗ ಅಧ್ಯಕ್ಷ ಅಲ್ಲಿಂದ ಕಾಲ್ತೆಗೆದ. ಕೆಲಸ ಮತ್ತೆ ಶುರುವಾಯಿತು. ಸ್ಥಳೀಯ ಯುವಕ ಸಂಘದವರು ಮಹಾನಂದ ಮತ್ತು ಆಕೆಯ ಗಂಡ ಇಬ್ಬರ ಬೆಂಬಲಕ್ಕೆ ನಿಂತಾಗ ಕಾರ್ಯದರ್ಶಿಯಾಗಲೀ ಅಧ್ಯಕ್ಷನಾಗಲೀ ತಮ್ಮ ಮಾತನ್ನು ಹಿಂತೆಗೆದುಕೊಳ್ಳಬೇಕಾಯ್ತು. ಅವರ ಅಸಹಕಾರ ಮುಂದುವರೆದಿದ್ದರೂ ಮಹಾನಂದ ಮಾತ್ರ ದಿಟ್ಟತನದಿಂದ ತನ್ನ ಕೆಲಸವನ್ನು ಮುಂದುವರೆಸಿದ್ದಾಳೆ. ಕಾರ್ಯದರ್ಶಿಯ ವಿರುದ್ಧ ಮೇಲ್ಮನವಿ ಕೂಡ ಹಾಕಿದ್ದಾಳೆ.

ಮಹಿಳಾ ಸಬಲೀಕರಣ ಒಂದು ಬಹುದೊಡ್ಡ ಕನಸು. ಆದರೆ ಬಹಳ ಜನರು ಆರ್ಥಿಕ ಸಬಲೀಕರಣಕ್ಕೇ ಅದನ್ನು ನಿಲ್ಲಿಸುತ್ತಾರೆ. ಆರ್ಥಿಕ ಸಬಲೀಕರಣವೆಂದು ಹೊಸ ಉದ್ಯೋಗವೊಂದನ್ನು ಸೃಷ್ಟಿಸಿಕೊಟ್ಟರೆ ಆಕೆಗೆ ಇನ್ನೊಂದು ಹೊರೆಯನ್ನು ತಲೆಯ ಮೇಲೆ ಇಟ್ಟಂತಾಗುತ್ತದಷ್ಟೇ. ಆರ್ಥಿಕವಾಗಿ ಗಟ್ಟಿಯಾದ ಮಹಿಳೆ ತನ್ನಲ್ಲಿರುವ ಪುರುಷಪ್ರಧಾನ ಮೌಲ್ಯವನ್ನು ಗೆಲ್ಲಲಿಲ್ಲವೆಂದರೆ ಆಕೆಯನ್ನು ಸಬಲ ಮಹಿಳೆ ಎನ್ನಲಾಗದು. ಶಿವಾಪುರದ ಹೀರಾಬಾಯಿ ಮತ್ತು ಹಿಡಕಲ್ಲಿನ ಮಹಾನಂದಾ, ಕಡತನ ಬಾಗೇವಾಡಿಯ ರಾಜಶ್ರೀ ಮಹಿಳಾ ಸಬಲೀಕರಣದ ಆಶಾಕಿರಣವಾಗಿ ನಿಲ್ಲುತ್ತಾರೆ. ಇಂಥ ಅನೇಕ ಹೆಣ್ಣುಮಕ್ಕಳಿದ್ದಾರೆ. ಗುಂಪುಗಳಲ್ಲಿ ಅವರು ಸೇರಿ ಹೋಗಿದ್ದಾರೆ. ವೈಯಕ್ತಿಕವಾಗಿ ಬೆಳೆಯುವುದರೊಂದಿಗೆ ತಮ್ಮ ಗುಂಪನ್ನೂ ಬೆಳೆಸುತ್ತಿರುವ ದೀಪಗಳಿವು. ಇಂಥವರನ್ನು ತಯಾರು ಮಾಡಲು ಸಂಘ ಸಂಸ್ಥೆಗಳು ಸತತ ಶ್ರಮಿಸಬೇಕು. ಸ್ವಸಹಾಯ ಸಂಘವಿರಲಿ, ಆರ್ಥಿಕ ಚಟುವಟಿಕೆ ಇರಲಿ ಅದು ಮಹಿಳೆಯರನ್ನು ತನ್ನ ತನವನ್ನು ಕಂಡುಕೊಳ್ಳುವುದಕ್ಕೆ, ತನ್ನನ್ನು ತಾನು ಗೌರವಿಸುವುದಕ್ಕೆ, ಸಮಾಜದ ಓರೆ ಕೋರೆಗಳನ್ನು ಪ್ರಶ್ನೆ ಮಾಡುವುದಕ್ಕೆ ಬಳಸಬೇಕು. ಒಂದೊಂದು ಕಾರ್ಯಕ್ರಮವನ್ನೂ ಸಬಲೀಕರಣದ ತರಬೇತಿಗಳಾಗಿ ಪರಿವರ್ತಿಸಬೇಕು. ಇವರ ಹೋರಾಟಕ್ಕೆ ಮನೆಯವರ, ಸ್ಥಳೀಯರ ಅರ್ಥಮಾಡಿಕೊಳ್ಳುವಿಕೆ, ಯುವಜನತೆಯ ಬೆಂಬಲ, ಅತ್ಯಗತ್ಯ. ಆಗ ಮಾತ್ರ ಅಂಥ ಪ್ರಯತ್ನವೆಂದೂ ಹುಸಿ ಹೋಗದು. ❑

# ಮರ್ಯಾದಾ ಹತ್ಯೆ: ಅಮಾನವೀಯತೆಯ ಪರಮಾವಧಿ

■ಸಮುದ್ಯತಾ ಕಂಜರ್ಪಣೆ

ಕರ್ನಾಟಕದಲ್ಲಿ ಇತ್ತೀಚೆಗೆ ಪ್ರಾರಂಭವಾದ ಆತಂಕಕಾರಿ ಬೆಳವಣಿಗೆಗಳಲ್ಲಿ ಮರ್ಯಾದಾ ಹತ್ಯೆ ಕೂಡಾ ಒಂದಾಗಿದೆ. ಉತ್ತರ ಭಾರತ ಹಾಗೂ ಇರಾನ್, ಇರಾಕ್‌ಗಳಂತಾ ಮುಸ್ಲಿಂ ರಾಷ್ಟ್ರಗಳಲ್ಲಿ ಹೆಚ್ಚಾಗಿರುವ ಈ ಪದ್ಧತಿ ಈಗ ಕರ್ನಾಟಕಕ್ಕೂ ಕಾಲಿರಿಸಿದ್ದು ಶೋಚನೀಯ. ಮದ್ದೂರು ಬಳಿಯ ಅಂಬಲವಾಡಿ ಎಂಬಲ್ಲಿ ನಡೆದ ಸುವರ್ಣ ಎಂಬ ಯುವತಿಯ ಹತ್ಯೆ ಹಾಗೂ ಮೈಸೂರು ಬಳಿಯ ಆಲನಹಳ್ಳಿಯಲ್ಲಿ ನಡೆದ ಸ್ಮೃತಿ ಎಂಬ ಯುವತಿಯ ಹತ್ಯೆ ಕರ್ನಾಟಕವನ್ನೇ ಬೆಚ್ಚಿ ಬೀಳಿಸಿದೆ. ಮರ್ಯಾದಾ ಹತ್ಯೆಯ ಇತಿಹಾಸ ಭಾರತದ ವಿಭಜನೆಯ ಕಾಲದಿಂದಲೂ ಬಂದಿದೆ. ಆದರೆ ಅದರ ಭಯಾನಕತೆಯನ್ನು ನಾವು ಇಂದು ಇಷ್ಟು ಹತ್ತಿರದಿಂದ ಕಾಣುತ್ತಿದ್ದೇವೆಂದರೆ ನಾವು ಯಾವ ರೀತಿಯ ಪ್ರಗತಿ ಹೊಂದುತ್ತಿದ್ದೇವೆಂದು ಬಿಡಿಸಿ ಹೇಳಬೇಕಿಲ್ಲ.

ಜಾತಿಯ ಬಗೆಗಿನ ಕುರುಡು ವ್ಯಾಮೋಹ ತನ್ನವರನ್ನೇ ಕೊಲ್ಲುವಷ್ಟರ ಮಟ್ಟಿಗೆ ಬೆಳೆಯುತ್ತದೆ ಎಂದರೆ ಇಂದು ನಾವಿರುವ ಸ್ಥಿತಿ ಎಷ್ಟು ಅಮಾನವೀಯ ಎಂಬುದು ಅರ್ಥವಾಬೇಕಾದದ್ದೇ. ರಾಜಕೀಯವೂ ಇದಕ್ಕೆ ಒಂದು ಮುಖ್ಯ ಕಾರಣ. ಜಾತಿ ಮತ್ತು ಧರ್ಮವನ್ನು ಉಳಿಸುವ ಹೆಸರಿನಲ್ಲಿ ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯವನ್ನು ಹೆಚ್ಚಿಸುವಲ್ಲಿ ರಾಜಕೀಯದ ಪಾತ್ರವೂ ಹೆಚ್ಚಾಗಿದೆ. ರಾಜಕೀಯದ ಹೆಸರಿನಲ್ಲಿ ರಾಜ್ಯವು ಇಂದು ಜಾತಿಗಳ ಆಧಾರದ ಮೇಲೆ ಒಡೆಯುತ್ತಿರುವುದನ್ನು ಕರ್ನಾಟಕ ರಾಜ್ಯದಲ್ಲೇ ಕಾಣಬಹುದು.

ಸುವರ್ಣಳಂತಹ ಅಷ್ಟೇನೂ ವಿದ್ಯಾವಂತಳಲ್ಲದ ಯುವತಿಗೂ, ಸ್ಮೃತಿಯಂತಹ ವಿದ್ಯಾವಂತ ಮಹಿಳೆಗೂ ಧರ್ಮದ ನೆಪದಲ್ಲಿ ಸಿಕ್ಕ ಮರ್ಯಾದೆ ಅವರ ಹತ್ಯೆ. ಈ ಎರಡೂ ಪ್ರಕರಣಗಳನ್ನೂ ನೋಡಿದಾಗ ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯದ ತೀವ್ರತೆ ಎಷ್ಟೆಂದು ತಿಳಿಯುತ್ತದೆ. ಇಂದಿನ 101ನೇ ಅಂತರರಾಷ್ಟ್ರೀಯ ಮಹಿಳಾ ದಿನದ ಸಂದರ್ಭದಲ್ಲಿ ಒಬ್ಬ ವಿದ್ಯಾವಂತ ಸ್ವಾವಲಂಬಿ ಮಹಿಳೆಯೂ ತನ್ನನ್ನು ತಾನು ಧರ್ಮದ ಬಂಧನದಿಂದ ಪಾರುಮಾಡಿಕೊಳ್ಳಲಾಗದ್ದು ವಿಷಾದಕರ. ವಾರಗಳ ಹಿಂದಷ್ಟೇ ತನ್ನ ಸಹೋದರನ ಕೈಯಿಂದಲೇ ಹತ್ಯೆಗೀಡಾದ ಸ್ಮೃತಿ ಪದವಿ ಕಾಲೇಜಿನಲ್ಲಿ ಸಹಾಯಕ ಪ್ರಾಧ್ಯಾಪಕಿಯಾಗಿದ್ದರು. ಲಿಂಗಾಯತ ಧರ್ಮದವರಾದ ಆಕೆ ಪ್ರೀತಿಸಿದ್ದು ವಿದ್ಯಾವಂತ, ದೈಹಿಕ ಶಿಕ್ಷಣ ನಿರ್ದೇಶಕನಾದ ಆದರೆ ದಲಿತನಾದ ಸುದೀಪ್ ಕುಮಾರ್‌ನನ್ನು. ಕೇವಲ ಜಾತಿಯ ಕಾರಣದಿಂದ ಆಕೆಯ ಎಂಟು ವರ್ಷದ ಪ್ರೀತಿಗೆ ಸಿಕ್ಕ ಮರ್ಯಾದೆ ಆಕೆಯ ಮಾರಣ ಹತ್ಯೆ.

ಈ ಪ್ರಕರಣದಲ್ಲಿ ಅಡಗಿರುವ ಸೂಕ್ಷ್ಮತೆಗಳನ್ನು ಗಮನಿಸಬೇಕು. ಮಹಿಳೆ ಎಷ್ಟೇ ಸ್ವಾವಲಂಬಿಯಾದರೂ, ತನ್ನನ್ನು ತಾನು ಇಂತಹ ಮೂಢನಂಬಿಕೆಗಳಿಂದ, ಪುರುಷರ ದಬ್ಬಾಳಿಕೆಯಿಂದ ಪಾರುಮಾಡಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಮರ್ಯಾದಾ ಹತ್ಯೆ ಸಾಧಾರಣವಾಗಿ ದಲಿತರನ್ನು, ಕೆಳಜಾತಿ/ವರ್ಗದವರನ್ನು ಪ್ರೀತಿಸಿದ ಕಾರಣಕ್ಕಾಗಿ ನಡೆಯುತ್ತಿರುವುದರ ಬಗ್ಗೆ ಮತ್ತು ದಲಿತರ ಸ್ಥಾನಮಾನದ ಕುರಿತೂ ಯೋಚಿಸಬೇಕಿದೆ. ಹೆಣ್ಣಿನ ಆಯ್ಕೆಯ ಸ್ವಾತಂತ್ರ್ಯವನ್ನೂ ಜಾತಿ/ಧರ್ಮ/ವರ್ಗದ ನೆಪದಲ್ಲಿ ಕಸಿದುಕೊಳ್ಳುತ್ತಿರುವುದು ನಿಜಕ್ಕೂ ಅಮಾನವೀಯ.

ಕುಟುಂಬದ ಗೌರವದ, ಮರ್ಯಾದೆಯ ಹೆಸರಿನಲ್ಲಿ ಅಧಿಕಾರಯುತ ಪುರುಷರು ಹೆಂಗಸರ ಮೇಲೆ ಎಸಗುವ ಇಂಥಾ ಪೈಶಾಚಿಕ ಕೃತ್ಯಕ್ಕೆ ಮರ್ಯಾದಾ ಹತ್ಯೆ ಎನ್ನುವರು. ಸಂಪ್ರದಾಯ, ಕಂದಾಚಾರ, ಆಚಾರ–ವಿಚಾರಗಳು ಮಹಿಳೆಯರನ್ನು ರಕ್ಷಿಸುವುದರ ಬದಲು ಎಂಥಾ ಕೃತ್ಯಕ್ಕೆ ಈಡುಮಾಡುತ್ತವೆ ಎನ್ನುವುದಕ್ಕೆ ಇದೊಂದು ಕಣ್ಣಿಗೆ ರಾಚುವ ವಾಸ್ತವ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಇಂದಿಗೂ ಹೆಣ್ಣಿಗೆ ತನ್ನ ಇಚ್ಛೆಯ ಬದುಕನ್ನು ರೂಪಿಸುವ ಅಥವಾ ತನ್ನ ಇಚ್ಛೆಯ ಗಂಡನನ್ನು ಆಯ್ದುಕೊಳ್ಳುವ ಹಕ್ಕಿಲ್ಲ, ಆಕೆ ಎಂದೆಂದಿಗೂ ತಂದೆ, ಸೋದರ, ಗಂಡನ ಅಧೀನದಲ್ಲೇ ಬದುಕನ್ನು ರೂಪಿಸತಕ್ಕದ್ದು.

ಮರ್ಯಾದಾ ಹತ್ಯೆಯ ಪ್ರಕರಣಗಳನ್ನು ನೋಡಿದಾಗ ಮಹಿಳೆ ಶತಮಾನಗಳಿಂದ ಯಾವುದರ ವಿರುದ್ಧ ಹೋರಾಡುತ್ತಿದ್ದಳೋ, ಅದೇ ಕಾಲಕ್ಕೆ ವಾಪಸ್ಸು ಹೋಗುತ್ತಿದ್ದೇವೇನೋ ಎಂಬ ಭಯ ಹುಟ್ಟುತ್ತದೆ. ರಕ್ತಬೀಜಾಸುರನಂತೆ ಮತ್ತೆ ಮತ್ತೆ ಹುಟ್ಟಿ ಬರುವ ಇಂತಹ ಸಮಸ್ಯೆಗಳ ವಿರುದ್ಧ ಹೋರಾಡಲು ಮಹಿಳೆ ವಿದ್ಯಾವಂತೆಯಾಗಿ, ಸ್ವಾವಲಂಬಿಯಾಗುವುದು ಎಷ್ಟು ಮುಖ್ಯವೋ, ಆಕೆಯ ಆಂತರಿಕ ಸಬಲತೆಯೂ ಅಷ್ಟೇ ಮುಖ್ಯ. ತನ್ನ ಮನೋಬಲದಿಂದ ಮಾತ್ರ ಮಹಿಳೆ ಇಂತಹ ದೈತ್ಯ ಸಮಸ್ಯೆಗಳ ವಿರುದ್ಧಹೋರಾಡಲು ಶಕ್ತಳಾಗುತ್ತಾಳೆ.

ದೇಶದ ಪ್ರತಿಯೊಬ್ಬ ಮಹಿಳೆಯೂ ಆಂತರಿಕವಾಗಿ ಬಲಿಷ್ಠಳಾಗಿ ಮಹಿಳೆಯರ ಸಮಗ್ರ ಸಬಲೀಕರಣಕ್ಕೆ ಕಾರಣಳಾಗಲಿ, [illegible] ವೀಯ ಕೃತ್ಯಗಳು ಕೊನೆಗಾಣಲಿ [illegible] ಎಲ್ಲರ ಆಶಯ. ಇಂದಿಗೂ ಮಹಿಳಾ ಹಕ್ಕುಗಳಿಗಾಗಿ ಮತ್ತು ಮಾನವ ಹಕ್ಕುಗಳಿಗೆ ಕೂಗು ಹಾಕಬೇಕಿರುವುದು ವಿಪರ್ಯಾಸ. ❑



# ಮರೆಯಲಾರದ ಕಲಿಕೆ

■ ಅಪೂರ್ವ

ವಿಮಾನ ನಿಲ್ದಾಣಕ್ಕೆ ಹೋಗೊ ಮುನ್ನ ನನ್ನ ಮನಸ್ಸಿನಲ್ಲಿ ಬಹಳಷ್ಟು ಆತಂಕ ಇತ್ತು. ಕುಟುಂಬವನ್ನು ಬಿಟ್ಟು ಎಂದು ಒಬ್ಬಳೆ ಹೋಗಿರಲಿಲ್ಲ. SPIC MACAY SCHOLARSHIP ಯೋಜನೆಯಲ್ಲಿ ನನ್ನ ಆಯ್ಕೆ ಆಗಿತ್ತು. ನಾನು ಆಯ್ದುಕೊಂಡಿದ್ದ ಗುರುಗಳಾದ ಅರುಣಾ ರಾಯ್ ಹತ್ತಿರ ಹೋಗಿ ಕಲಿಯಲು ಅವಕಾಶ ಒದಗಿ ಬಂದಿತ್ತು.

ರಾಜಸ್ಥಾನ್ ದೇವ್ ದೊಂಗ್ರಿನಲ್ಲಿ ಇರುವ ಮಜರ್‌ದೂರ್ ಕಿಸ್ಸಾನ್ ಶಕ್ತಿ ಸಂಘಟನ್ (MKSS)ಹೋಗಿ ತಲುಪಿದೆ. ಉರಿ ಬಿಸಿಲು, ಆದರೆ ಅಲ್ಲಿ ತಲುಪುತ್ತಿದ್ದಂತೆ ಅಲ್ಲಿನವರ ಸ್ನೇಹ ಅದೆಲ್ಲವನ್ನು ಮರೆಸಿತು. ನನ್ನೊಟ್ಟಿಗೆ ಇನ್ನಿಬ್ಬರು ಹುಡುಗಿಯರು ಕೂಡ ಇದ್ದರು. ಅಲ್ಲಿ ಬಂದಿದ್ದ ಎಲ್ಲ 'interms' ಉಸ್ತುವಾರಿ 'ದಾಬ್ಬಾ' ಅಜ್ಜನದು. ಹೋದ ದಿನದಿಂದಲೇ ಸಂಘಟನೆಯ ಕಾರ್ಯಗಳಲ್ಲಿ ತೊಡಗಿದ್ದೆವು. ಜೈಪುರದಲ್ಲಿ ನಡೆದ 'ಜನ್ಸುನ್ವಾಯಿ'ನಲ್ಲಿ ಭಾಗವಹಿಸಿದೆವು. ಜನಶಕ್ತಿಯ ದೊಡ್ಡದೊಂದು ರೂಪ ನಮ್ಮ ಮುಂದೆ ಇತ್ತು. ಜನರು MKSSನಲ್ಲಿ ಇಟ್ಟಿದ್ದ ಅಪಾರ ಭರವಸೆ ಹಾಗೂ ವಿಶ್ವಾಸ ಕಾಣುತ್ತಿತ್ತು. ನಮ್ಮೆಲ್ಲರಿಗೂ ರೈತರ ಹಾಗು NREGA ಕಾರ್ಮಿಕರ ಕಷ್ಟಗಳು ಇನ್ನಷ್ಟು ಅರಿವಾದವು. ಅರುಣಾ ಜೀ. ನಿಖಿಲ್ ಡೇ ಮತ್ತು ಶಂಕರ್‌ಸಿಂಗ್‌ರವರ ಮಾತು ಕೇಳುವ ಅವಕಾಶ ಸಿಕ್ಕಿತು.

ಅದಾದ ನಂತರ ಹಳ್ಳಿ ಹಳ್ಳಿಯ ಎನ್.ಆರ್.ಜಿ.ಎ ಸ್ಥಳಗಳಿಗೆ ಭೇಟಿ ನೀಡಿ ಅಲ್ಲಿನ ಜನರ ಕಷ್ಟ-ಸುಖಗಳನ್ನು ಹಂಚಿಕೊಂಡೆವು. ಈ ರೀತಿಯಲ್ಲಿ ಅಲ್ಲಿನ ಜನಸಮಾನ್ಯರ ಜೊತೆ ಬೆರೆತು, ಅವರೊಡನೆ ಬಹಳಷ್ಟು ಕಾಲ ಕಳೆದವು. ನಗರದ ವಾತವರಣದಲ್ಲಿ ಬೆಳೆದು ಬಂದ ನನಗೆ ಈ ಒಡನಾಟ ಬಹಳಷ್ಟು ಕಲಿಸಿತು. MKSS ಪರವಾಗಿ ನಾವು ಅವರಿಗೆ ಸರ್ಕಾರ ಜಾರಿ ಮಾಡಿರುವ ಕಾಯ್ದೆ ಕಾನೂನುಗಳ ಬಗ್ಗೆ ಮಾಹಿತಿ ಕೊಡಲು ಸಹಾಯ ಮಾಡುತ್ತಿದ್ದೆವು. ಅಲ್ಲಿನ ಹಲವಾರು ಸಮಸ್ಯೆಗಳು ನಮಗೆ ನಮ್ಮ ದೇಶದ ಬುಡಮಟ್ಟದಲ್ಲಿರುವ ಕಾರ್ಮಿಕ ವರ್ಗದವರ ಪಾಡನ್ನು ತೋರಿಸುತ್ತಿತ್ತು. ಅದರ ಜೊತೆ ನಗರಗಳಿಂದ ಬಂದಿದ್ದ ನಮಗೆ ಈ ನಾನಾ ಪ್ರಕಾರಗಳ ತೊಂದರೆಗಳ ಸ್ವಲ್ಪವು ಅರಿವಿರಲಿಲ್ಲ. ದಿನಕ್ಕೆ 119/- ಅಥವಾ ಅದಕ್ಕಿಂತಲೂ ಕಡಿಮೆ ವೇತನದಲ್ಲಿ ಜೀವನ ಮಾಡುವ ಜನರೂ ಇರುತ್ತಾರೆಯೇ ಎಂಬ ಆಶ್ಚರ್ಯ, ಬೇಸರ. ಇಂದಿಗೂ ಅವರ ಸ್ಥಿತಿ ನನಗೆ ನನಗೆ ಕಾಡುತ್ತಿರುತ್ತದೆ.

ಭಿಲ್ವಾರದಲ್ಲಿ ನಡೆದ ಕಾರ್ಯಗಾರ ನಮಗೆ ಅದ್ಭುತ ಕಾನೂನಿನ ಬಗ್ಗೆ ಮಾಹಿತಿ ನೀಡಿತು. RTI ನಿಯಮವನ್ನು ಉಪಯೋಗಿಸುವ ಮತ್ತು RTI ಅರ್ಜಿ ಬರೆಯುವ ವಿಧಾನಗಳನ್ನು ನಾವು ಕಲಿತು ಬೇರೆಯುವವರಿಗೂ ಕಲಿಸಿದೆವು. ಇದರ ಸಹಾಯದಿಂದಾಗಿರುವ ಸಾಕಷ್ಟು ಗೆಲುವಿನ ಬಗ್ಗೆ ಕೂಡ ಅರಿತೆವು. ಈ ಕಾರ್ಯಾಗಾರದಲ್ಲಿ MKSS ಹುಟ್ಟು ಹಾಗೂ RTI ಜಾರಿಗೆ ತರುವಲ್ಲಿ ಅದರ ಪಾತ್ರ ಕೂಡ ಅರಿತೆವು.

ನಾವು ಹೋಗಿದ್ದ ಸಮಯದಲ್ಲಿ ದಿಲ್ಲಿಯಲ್ಲಿ ನಡೆಯುತ್ತಿದ್ದ NCPRI (National Campaign for People's Right to Information) ಜನ ಲೋಕಪಾಲ್ ಬಿಲ್ ಚರ್ಚೆಯಲ್ಲಿ ಪಾಲ್ಗೊಂಡೆವು. ಐತಿಹಾಸಿಕ ಬೆಳವಣಿಗೆ ಆದ ಇದರಲ್ಲಿ ನಮಗೆ ಭಾಗವಹಿಸುವ ಅವಕಾಶ ಸಿಕ್ಕಿದ್ದು ನಮ್ಮ ಭಾಗ್ಯ. ಟಿವಿ ಮಾಧ್ಯಮದಲ್ಲಿ ನಾಯಕಿ-ನಾಯಕರುಗಳನ್ನು ನೋಡುತ್ತಾ ಬಂದಿದ್ದ ನನಗೆ ಕೂತು ಚರ್ಚಿಸುವ ಸದಾವಕಾಶ ಸಿಕ್ಕಿತು. ದಿಲ್ಲಿಯ ನಂತರ ಅರುಣಾ ಅಜ್ಜಿಯ ಜೊತೆ ತಿಲೋನಿಯಲ್ಲಿರು SWRC (Social Work and Research Centre)ಗೆ ಬಂದೆವು. ತಿಲೋನಿಯಲ್ಲಿ ನಡೆಯುವ ಎಲ್ಲ ಕೆಲಸಗಳನ್ನು ನೋಡಿದೆವು. ಅಲ್ಲಿ ವಾತಾವರಣ ಮನಸ್ಸಿಗೆ ಆನಂದ ತಂದಿತು. SWRCನಲ್ಲಿನ ಪಪ್ಪೆಟ್ರಿ ಮತ್ತು ಸೋಲಾರ್ ಇಂಜಿನಿಯರ್‌ಗಳ ಕೆಲಸವು ನಮ್ಮಲ್ಲಿ ಸ್ಫೂರ್ತಿ ತಂದಿತು. ಬೇರೆಬೇರೆ ದೇಶಗಳಿಂದ ಬಂದ ಈ ಹೆಣ್ಣುಮಕ್ಕಳು ಶ್ರದ್ಧೆಯಿಂದ ತಮ್ಮ ಜೀವನದಲ್ಲಿ ಬೆಳಕಿನಡೆಗೆ ನಡೆಯುತ್ತಿದ್ದರು. ಎಂದೂ ಶಾಲೆಗೆ ಹೋಗದಿರುವ ಹೆಣ್ಣುಮಕ್ಕಳು ಸೋಲಾರ್ ಲ್ಯಾಟಿನ್‌ಗಳನ್ನು ಮಾಡಲು ಕಲಿಯುತ್ತಿದ್ದನ್ನು ನೋಡಿದಾಗ ಮನಃತುಂಬಿತು. ಅಲ್ಲಿನ ಸಾಮೂಹಿಕ ಆಕಾಶವಾಣಿಯಲ್ಲಿ ಹಲವಾರು ಹಿಂದಿ ಹಾಗೂ ಕನ್ನಡ ಜಾಡುಗಳು ಹಾಡಿದೆನು, ಅದರೊಂದಿಗೆ ಮಾರ್ವಾರಿ ಹಾಡುಗಳನ್ನೂ ಕಲಿತೆ. ಅಜ್ಜಿಯ ಜೊತೆ ಸಾಕಷ್ಟು ವಿಚಾರಗಳ ಬಗ್ಗೆ ಚರ್ಚಿಸಿ, ನನ್ನ ಮುಂದಿನ ಜೀವನದ ಬಗ್ಗೆ, ಕನಸುಗಳನ್ನು ಚರ್ಚಿಸಿದೆನು. ಅರುಣಾರಾಯ್‌ರೊಂದಿಗೆ ಹೀಗೊಂದು ದಿನ ಮಾತಾಡುವ ಅವಕಾಶ ಸಿಗುತ್ತದೆಂದು ಕನಸು ಮನಸ್ಸಿನಲ್ಲೂ ನೆನೆಸಿರಲಿಲ್ಲ. ಸಮಾಜದಲ್ಲಿ ಪರಿವರ್ತನೆ ತರುವ ಹುಮ್ಮಸ್ಸಿರುವ ನಮ್ಮೆಲ್ಲರಿಗೂ ಈ ಅನುಭವ ಸಾಕಷ್ಟು ಕಲಿಸಿದೆ. ❑

# ಬದುಕಿನ ಗಾಡಿ ನೂಕುವ ಬೀಡಿ

*(10ನೇ ಪುಟದಿಂದ)*



ನೀರಲ್ಲಿ ಮುಳುಗಿಸಿ, ಅವರೇ ಕೊಟ್ಟ ಕಬ್ಬಿಣದ ಅಚ್ಚನಿಟ್ಟು ಕತ್ತರಿಯಿಂದ ಎಲೆ ಕತ್ತರಿಸಬೇಕು. ಕತ್ತರಿಸಿದ ಎಲೆಯು ಒಣಗಿದ್ದರೆ, ಒದ್ದೆ ಬಟ್ಟೆಯಲ್ಲಿ ಸುತ್ತಿಡಬೇಕು. ಸ್ವಲ್ಪ ಹರಿದಿದ್ದರೂ ಸುರುಳಿ ಸುತ್ತುವಾಗ ಪೂರ್ತಿ ಹರಿಯುತ್ತದೆ. ಎಲೆ ಕತ್ತರಿಸುವಾಗಲೂ ಒಂದು ಎಲೆಯಿಂದ ಎರಡು–ಮೂರು ಬೀಡಿಗಾಗುವಷ್ಟು ಎಲೆಯಾಗುವ ಹಾಗೆ ಜಾಣ್ಮೆಯಿಂದ ಕತ್ತರಿಸಬೇಕು. ಎಲೆಯ ದಂಟು ಮಧ್ಯಕ್ಕೆ ಬಂದರೆ ಕಟ್ಟುವ ಬೀಡಿ ಸೊಗಸಾಗುವುದಿಲ್ಲ. ಹಾಗಾಗಿ ಆ ಎಚ್ಚರವೂ ಇರಬೇಕು. ಎಡಗೈಯ ಮೂರು ಬೆರಳಲ್ಲಿ ಎಲೆಯನ್ನು ಸುರುಳಿಯಾಗಿ ಹಿಡಿದು ಬಲಗೈಯ ತೋರು ಬೆರಳಿನಿಂದ ಹೊಗೆಸೊಪ್ಪನ್ನು ಬೀಡಿಯ ಆರಂಭದಿಂದ ಕೊನೆಯವರೆಗೂ ಮಿತವಾಗಿ ಪಸರಿಸಿ ಜಾಗ್ರತೆಯಲ್ಲಿ ಸುರುಳಿ ಸುತ್ತಬೇಕು. 'V' ಆಕಾರದಲ್ಲಿ ಸುರುಳಿ ಸುತ್ತುತ್ತಾ ಬೀಡಿಯ ಮೇಲ್ಭಾಗಕ್ಕೆ ಹಿಡೆಯುವ ನಕೆ, ಕೆಳಭಾಗಕ್ಕೆ ಹೊಡೆಯುವ ನಕ್ ಕ್ರಮಬದ್ಧವಾಗಿರಬೇಕು. ಮೇಲ್ಭಾಗದಲ್ಲಿ ಅರಳಾಗುತ್ತಿರುವ ಹೂವಿನ ದಳದಂತೆ ಮೂರು 'ನಕ್' ಹೊಡೆದರೆ ಕೆಳಭಾಗಕ್ಕೆ ಹೊಗೆಸೊಪ್ಪು ಕೆಳಜಾರದಂತೆ ಭದ್ರವಾದ ಒಂದು 'ನಕ್' ಹೊಡೆಯುತ್ತಾರೆ. 'V' ಆಕಾರದಲ್ಲಿ ಸುರುಳಿ ಸುತ್ತುವಾಗ ಕೊನೆಯ ಸುತ್ತಿನಲ್ಲಿ 'V' ಯಂತೆಯೇ ಬರುವ ಎಲೆಯ ತುದಿಗೆ ಎರಡು ಸುತ್ತು ಕೆಂಪು, ಹಳದಿ, ಕಪ್ಪು ಬಣ್ಣದ ದಾರವನ್ನು ಸುತ್ತಿ ತುದಿಯನ್ನು ಸರಿಯಾಗಿ ತಿರುವುತ್ತಾರೆ. ಹೀಗೆ ಒಂದೊಂದೇ ಕಟ್ಟಿದ ಬೀಡಿಯನ್ನು '25' ರ ಸಂಖ್ಯೆಯ ಒಂದು ಕಟ್ಟು ಮಾಡುತ್ತಾರೆ. ಈ ಕಟ್ಟನ್ನು ಹೊರಗಿನ ಸುತ್ತಲ್ಲಿ 13, ಒಳಗಿನ ಸುತ್ತಲ್ಲಿ 7, ಮಧ್ಯದ ಸುತ್ತಲ್ಲಿ 5 ಬೀಡಿಗಳನ್ನು ಒಂದೇ ಅಳತೆಯಲ್ಲಿ ಜೋಡಿಸಬೇಕು. ಹೀಗೆ 25ರ ಸಂಖ್ಯೆಯ ಕಟ್ಟುಗಳೊಂದಿಗೆ ನೂರು ಇನ್ನೂರು ಲೆಕ್ಕಾಚಾರದೊಂದಿಗೆ ಸಾವಿರದವರೆಗಿನ ಬೀಡಿಕಟ್ಟಲಾಗುತ್ತದೆ. ಒಂದು ಸಾವಿರ ಬೀಡಿಗೆ ಇತ್ತೀಚೆಗೆ ಏರಿಕೆಯಾದ ಬೆಲೆ 116 ರೂಪಾಯಿ ಇದೆ. ಈ 116 ರೂಪಾಯಿ ಸಿಗಬೇಕಾದರೆ ವೇಗವಾಗಿ ಕಟ್ಟುವುದಾದರೂ ಒಂದು ದಿನ ದುಡಿಯುವುದು ಅನಿವಾರ್ಯ. ಕೆಲವರಿಗೆ ಅದೂ ಸಾಧ್ಯ ವಾಗುವುದಿಲ್ಲ. 500–600 ಬೀಡಿ ಕಟ್ಟುವವರೂ ಇದ್ದಾರೆ. ಅವರಿಗೆ ದಿನವೊಂದಕ್ಕೆ 55–65 ರೂಪಾಯಿ ಸಂಪಾದನೆಯಾಗುತ್ತದೆ. ಇದೂ ಸುಲಭದಿಂದ ಸಾಧ್ಯವಿಲ್ಲ. ಬೀಡಿ ಕಟ್ಟಿಸುವ ಯಜಮಾನನ ದರ್ಪ, ದಬ್ಬಾಳಿಕೆಗಳೊಂದಿಗೆ ಅವನ ದೌರ್ಜನ್ಯಗಳಿಗೂ ಗುರಿಯಾಗ ಬೇಕಾಗುತ್ತದೆ. ಬೆವರು ಸುರಿಸಿ ದುಡಿದ ಕೂಲಿಯನ್ನು ನಿಗದಿತ ಸಮಯಕ್ಕೆ ವಾರಾಂತ್ಯದ ಲೆಕ್ಕಾಚಾರದಲ್ಲಿ ನೀಡದೇ ಇರುವ ಮಾಲೀಕರೂ ಇದ್ದಾರೆ. ಅಧಿಕೃತವಾದ ಪಾಸ್‌ಬುಕ್‌ಗಳು ಇಲ್ಲದೇ ಹೋದಾಗ ಕಟ್ಟಿದ ಬೀಡಿಯ ಮಜೂರಿ ಮಾತ್ರ ಲಭ್ಯವಾಗುತ್ತದೆ. ಬೇರೆ ಯಾವುದೇ ಫಲಾನುಭವಗಳನ್ನು ಪಡೆಯಲಾಗುವುದಿಲ್ಲ. ತನ್ನ ಕೈಗಳಿಗೆ 'ಪಾಸ್‌ಬುಕ್' ಇಲ್ಲದೆ ಇರುವ ಬೀಡಿಯ ಲೆಕ್ಕಾಚಾರವನ್ನು ಕಂಪನಿಗೆ ಲೆಕ್ಕ ತೋರಿಸುವಾಗ ತಮ್ಮ ವೈಯಕ್ತಿಕ ಪಾಸ್‌ಬುಕ್‌ಗಳಿಗೆ ಅಥವಾ ತಮ್ಮ ಬಂಧುಗಳ ಪಾಸ್‌ಬುಕ್‌ಗೆ ಹಾಕುತ್ತಾರೆ. ಹಾಗಾಗಿ ಬೀಡಿ ಕಟ್ಟದೆಯೇ ಇರುವ ಮಧ್ಯವರ್ತಿಗಳಾಗಿ ಫಲಾನುಭವಗಳನ್ನು ಪಡೆಯುತ್ತಾರೆ. ವರ್ಷಕೊಮ್ಮೆ ಪಡೆಯುವ ಬೋನಸ್, ರಜೆ ಸಂಬಳದೊಂದಿಗೆ ವೈದ್ಯಕೀಯ ಭತ್ಯೆಗಳನ್ನು ಅವರೇ ಪಡೆದುಕೊಳ್ಳುತ್ತಾರೆ. ಶಾಲೆಯಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ಸಿಗುವ ವಿದ್ಯಾರ್ಥಿ ವೇತನ ಯಾವುದೂ ಲಭ್ಯವಾಗುವುದಿಲ್ಲ. ಅಧಿಕೃತ ಪಾಸ್‌ಬುಕ್‌ಗಳಿಲ್ಲದೇ ಹೋದಾಗ 58 ವರ್ಷಗಳ ನಂತರ ಕಾರ್ಮಿಕ ಇಲಾಖೆಯ ಆದೇಶದಂತೆ ಕೊಡಮಾಡುವ ಪಿಂಚಣಿಯೂ ಲಭ್ಯವಿಲ್ಲ, ಬದುಕಿನ ಭರವಸೆಯ ಎಲ್ಲ ಲೆಕ್ಕಾಚಾರವನ್ನು ತಲೆಕೆಳಗು ಮಾಡುವಂತಹ ಹುನ್ನಾರಗಳೂ ಬೆಳೆಯುತ್ತವೆ.

ಬೀಡಿ ಕಟ್ಟಬೇಕಾದರೆ ಬೆನ್ನುಬಾಗಿಸಿ, ಕಣ್ಣನ್ನು ಕೇಂದ್ರಗೊಳಿಸಿ, ಬೀಡಿಯ ಸೂಪನ್ನು ಮಡಿಲಲ್ಲಿಟ್ಟು, ತಂಬಾಕು ಸೇವನೆಯನ್ನು ಮಾಡದೆಯೇ ಉಚ್ವಾಸ ನಿಚ್ವಾಸದಲ್ಲಿ ಸೇರಿಕೊಂಡು ಉಸಿರು ಕಸಿಯುವ ನೂರಾರು ಯಾತನೆಮಯ ಘಟನೆಗಳೂ ಇವೆ. ಹಗಳಿರುಳೆನ್ನದೆ ಬೀಡಿಯ ಸೂಪ್ ಮಡಿಲಲ್ಲಿರುವುದರಿಂದ ಸಹಜವಾಗಿಯೇ ತಂಬಾಕನ್ನು ಉಸಿರಾಡಬೇಕಾಗುತ್ತದೆ. ಇದು ಕೇವಲ ಆಕೆಯೊಬ್ಬಳ ಪರಿಸ್ಥಿತಿಯಲ್ಲ. ಮನೆತುಂಬಾ ಓಡಾಡುತ್ತಾ, ಮಡಿಲಲ್ಲಿ ಮಲಗುವ ಮಗು ಈ ಹಿಂಸೆಗೆ ಒಳಗಾಗುತ್ತದೆ. ಹೊಟ್ಟೆಯ ಹಸಿವೆಗೆ ದುಡಿಮೆ ಅನಿವಾರ್ಯ ವಾದುದರಿಂದ ಸಣ್ಣ ವಯಸ್ಸಿನಲ್ಲಿ ಹಲವಾರು ಆರೋಗ್ಯ ಸಮಸ್ಯೆಗಳಿಗೆ ಗುರಿಯಾಗುತ್ತಾರೆ. ಅಸ್ತಮಾ, ಕೆಮ್ಮು, ಶ್ವಾಸಕೋಶ ಸಂಬಂಧಿ ಕಾಯಿಲೆಗಳು, ಬೆನ್ನು ನೋವು, ಕೀಲು ನೋವಿನ ಸಮಸ್ಯೆಗಳು, ಕ್ಯಾನ್ಸರ್ ನಂತಹ ಮಾರಕ ರೋಗವೂ ಆಕ್ರಮಿಸಿಕೊಳ್ಳಬಹುದು. ತನುವಿನ ಬೇಕು ಬೇಡಗಳು ಮುಖ್ಯವಾಗದೆ ದುಡಿಯುವುದೊಂದೇ ಅನಿವಾರ್ಯ ವಾಗುತ್ತದೆ.

ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳಾ ಕಾರ್ಮಿಕರಿರುವ ಬೀಡಿ ಉದ್ದಿಮೆ ಅಸಂಘಟಿತ ವಲಯವನ್ನು ದಾಟಿ ಸುಸಂಘಟಿತಗೊಂಡಿದೆ. ತಮ್ಮ ಬೇಡಿಕೆ ಹಕ್ಕುಗಳಿಗಾಗಿ ಕಾರ್ಮಿಕರು ಬೀದಿಗಿಳಿದು ಹೋರಾಟ ಮಾಡಲು ಸಿದ್ಧರಿದ್ದಾರೆ. ಆದರೆ ಎಲ್ಲಾ ಆರ್ಥಿಕ ವಲಯಗಳಂತೆ ಇಲ್ಲಿಯೂ ಮಧ್ಯವರ್ತಿಗಳ ಕಾಟ ತಪ್ಪಿಲ್ಲ. ಬೀಡಿಕಂಪನಿಗಳಿಗೆ ಬೀಡಿಯನ್ನು ಕಟ್ಟಿಸಿಕೊಡುವ ಏಜಂಟುಗಳಾಗಿ ಕಾರ್ಯನಿರ್ವಹಿಸುವ ಮಂದಿ ಎಷ್ಟೋ ಸಾರಿ ಸಿಗಬೇಕಾದ ಸವಲತ್ತುಗಳ ಸರಿಯಾದ ಮಾರ್ಗದರ್ಶನ ನೀಡುವುದಿಲ್ಲ. ಅಶಿಕ್ಷಿತರು ಹೆಚ್ಚಾಗಿ ಇರುವ ಈ ಉದ್ದಿಮೆಯಲ್ಲಿ ಅಮಾಯಕ ಮಹಿಳೆಯರನ್ನು ದಬಾಯಿಸುವುದು, ಹಿಂಸಿಸುವುದು, ಮೋಸಗೊಳಿಸುವುದು, ಶೋಷಿಸುವುದು ಸುಲಭ ಸಾಧ್ಯವಾಗುತ್ತದೆ.

ಇಡೀ ಕರಾವಳಿಯ ಮಹಿಳಾ ಜಗತ್ತಿನ ದಿಕ್ಕನ್ನೇ ಬದಲಿಸಿದ ಬೀಡಿ ಉದ್ದಿಮೆ ಕಲಿತವರ, ಕಲಿಯದವರ ಜೀವನಾಡಿಯಾಗಿ ಬದುಕುಳಿದಿದೆ. ಒಡಲ ಬೆಂಕಿಗೆ ಒಂದಿಷ್ಟು ತಂಪೆರೆದು ಬದುಕು ಕಟ್ಟಲು ಸಾಧ್ಯವಾದರೂ ಬದುಕಿನ ಆವರ್ತನದ ಪುನರಾವರ್ತನದೊಳಗೆ ನಿರ್ವಂಚನೆಯ ಭಾವಜಗತ್ತಿಗೆ ಬದುಕುರಿಂಗಣಿಸುತ್ತದೆ. ❑



## ನಮ್ಮ ಮಾನಸ ಪತ್ರಿಕೆ



'ನಮ್ಮ ಮಾನಸ' ಮುಂದುವರೆಯುತ್ತಿರುವುದು ಸಂತೋಷದ ವಿಷಯ. ರತಿಯವರು ಬರೆದ ಕಳಕಳಿಯ ಪತ್ರ ಓದಿದೆ. ನನಗೆ ಅರ್ಥವಾಗಲಿಲ್ಲ. ಜನವಾದಿ ಎಡ ಚಿಂತನೆಯನ್ನು ಹೊಂದಿರುವ ಸಂಘಟನೆ ಖಂಡಿತ ಹೌದು. ಆದರೆ ಎಡಪಕ್ಷ ಮರುಚಿಂತನೆ ನಡೆಸಿ ನಮಗೆ ಕ್ರಿಯಾಶೀಲರಾಗುವ ಸ್ವಾತಂತ್ರ ನೀಡಲು ಪ್ರಯತ್ನ ನಡೆಸಿವೆ ಎಂಬ ಮಾತುಗಳನ್ನೇಕೆ ಮಾನಸದ ಮೂಲಕ ಹೇಳುತ್ತಿದ್ದೀರಿ ಎಂದು ಅರ್ಥವಾಗಲಿಲ್ಲ. ಜನವಾದಿಯ ಮಟ್ಟಿಗಂತೂ ನಮ್ಮ ಸಂಘಟನೆಯೂ ಸಂವಿಧಾನಕ್ಕನುಗುಣವಾಗಿ ಪ್ರತಿ ವರ್ಷ ಸದಸ್ಯತ್ವ ಮೂರು ವರ್ಷಕ್ಕೊಮ್ಮೆ ಪ್ರಾಥಮಿಕ ಹಂತದಿಂದ ಕೇಂದ್ರದವರೆಗೂ ನಮ್ಮದೇ ಸದಸ್ಯತ್ವದ ಆಧಾರದಲ್ಲಿ ಸಮ್ಮೇಳನಗಳನ್ನು ನಡೆಸುತ್ತೇವೆ. ಅಲ್ಲದೆ ಚಳುವಳಿಯಿಂದ ಯಾವತ್ತು ದೂರ ನಿಲ್ಲದೆ ನಿರಂತರವಾಗಿ ಮಹಿಳೆಯರ ಮಧ್ಯೆ ಮತ್ತು ಮಹಿಳೆಯರಿಗಾಗಿ ಚಳುವಳಿ ಕಟ್ಟುತ್ತಲೇ ಮಹಿಳೆಯರ ಸಮಸ್ಯೆ, ಮಹಿಳೆಯರದು ಮಾತ್ರವಲ್ಲ, ಅದು ಇಡೀ ಸಮಾಜದ ಸಮಸ್ಯೆ ಮತ್ತು ಒಟ್ಟು ಸಮಾಜದ ಭಾಗವಾಗಿಯೇ ಅದನ್ನು ನೋಡಬೇಕು. ಒಟ್ಟು ಸಮಾಜದ ಸಮಸ್ಯೆಗಳ ಜೊತೆಯೇ ಮಹಿಳೆಯರ ಸಮಸ್ಯೆಯು ಪರಿಹಾರವಾಗುವುದೆಂಬ ಸ್ಪಷ್ಟತೆಯೊಂದಿಗೆ ಕಳೆದ 32 ವರ್ಷಗಳಿಂದ ಕೆಲಸ ಮಾಡುತ್ತಿದ್ದೇವೆ. ನಮಗೆಂದೂ ಚಳುವಳಿ ಕಾವು ಕಳೆದುಕೊಂಡಿದೆ ಎಂದೂ ಅನಿಸಿಲ್ಲ, ನಿಶ್ಯಸ್ತ್ರೀಕರಣಗೊಂಡಿದೆ ಎಂಬುದನ್ನು ನಾವು ಖಂಡಿತ ಒಪ್ಪುವುದಿಲ್ಲ. ನಮಗೆ ಚಳುವಳಿ ಮತ್ತು ಬದಲಾವಣೆ ಎರಡರ ಬಗ್ಗೆಯೂ ನಂಬಿಕೆ, ವಿಶ್ವಾಸ ಇದೆ ಮತ್ತು ಅದು ಎಂದೂ ಕುಂದುವುದಿಲ್ಲ. ಸ್ವಾಯತ್ತತೆ ಎಂದುಕೊಂಡು ಮುಖ್ಯವಾಹಿನಿಯ ಆಚೆ ಇರುವ ಕಾರಣದಿಂದ ನಿಮಗೆ ಹಾಗೆ ಅನಿಸುತ್ತಿರಬಹುದು. ಪಕ್ಷ ರಾಜಕಾರಣದಿಂದಾಚೆಯು ಒಂದು ರಾಜಕೀಯ ಸ್ಪಷ್ಟತೆಯನ್ನು ಬೆಳೆಸಿಕೊಳ್ಳುವ ಮೂಲಕವೇ ಹಲವು ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬಹುದು.

ನಮ್ಮ ಮಾನಸಕ್ಕೆ ಅಭಿನಂದನೆಗಳು. ಮಹಿಳೆಯರ ಧ್ವನಿಯಾಗಿ, ಮಹಿಳೆಯರಿಗೆ ಸ್ಫೂರ್ತಿ ನೀಡುತ್ತ ಮುಂದುವರೆಯಲೆಂದು ಹಾರೈಸುತ್ತೇನೆ.

ಪ್ರೀತಿಯಿಂದ

**ವಿಮಲಾ**



ನಮ್ಮ ಮಾನಸ, ನೊಂದ ಮಹಿಳೆಯರ ಪರವಾಗಿ ನಿಲ್ಲಬಲ್ಲ ಪತ್ರಿಕೆ. ಈ ಹಿಂದೆ ಪತ್ರಿಕೆ ನಿಲ್ಲಬಹುದೆಂಬ ವಿಷಯ ಕೇಳಿ, ಆಘಾತವೆ ಆಗಿತ್ತು. ಅಂತೂ ಇಂತು ಮಾರ್ಚ ತಿಂಗಳಿನಲ್ಲಿ ಮಾನಸ ಬಂದಾಗ ಒಂದಿಷ್ಟು ಸಮಾಧಾನ. ಈ ಮಾಸದ ಮಾನಸ ಹೊಸ ಚೈತನ್ಯ ತುಂಬಿಕೊಂಡಂತಿದೆ. "ಗಾರ್ಮೆಂಟ್ಸ್‌ನಲ್ಲಿ ಕಾರ್ಮಿಕರ ಪರಿಸ್ಥಿತಿ" ಲೇಖನ ಸಶಕ್ತೀಕರಣಕ್ಕೆ ಹಿಡಿದ ಕನ್ನಡಿಯಂತಿತ್ತು. ಅಲ್ಲದೆ 'ನಿಮ್ಮೊಂದಿಗೆ' ಮಾನಸಳ ಮನದಾಳದ ಮಾತುಗಳು ಇಷ್ಟವಾದವು. ರತಿಯವರ ಕೊನೆಯ ಮಾತಿಗೆ ನಾವು ಧ್ವನಿಗೂಡಿಸುತ್ತೇವೆ. ಮಾನಸ ಪತ್ರಿಕೆ ನಿಲ್ಲದಿರಲಿ– ನೊಂದವರ ಬದುಕಿನ ಕನಸುಗಳನ್ನು ಜೀವಂತವಾಗಿಸಲು, ಅವರಿಗೊಂದಿಷ್ಟು ಸಾಂತ್ವನ ಹೇಳಲು.

ಕಳಕಳಿಯಿಂದ

*ರಮೇಶ್, ದೊಡ್ಡಬಳ್ಳಾಪುರ*

"ನಮ್ಮ ಮಾನಸ" ಹೆಸರಿಗೆ ತಕ್ಕಂತೆ ಮನಸ್ಸನ್ನು ಜಾಗೃತ ಮೂಡಿಸಲು ಮತ್ತು ಹೆಣ್ಣು ಮಕ್ಕಳ ಸಂಕುಚಿತಗೊಂಡಿರುವ ಮನಸ್ಸು ಮತ್ತು ಅವರಲ್ಲಿ ಆತ್ಮಸ್ಥೈರ್ಯ ತುಂಬುವುದಕ್ಕೆ ಈ ಪತ್ರಿಕೆ ಪೂರಕವಾಗಿದೆ ಮತ್ತು ಶ್ರಮವಹಿಸಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ ರಾಜಕೀಯವಾಗಿ ಮಹಿಳೆಯರ ಜವಾಬ್ದಾರಿಗಳೇನು ಎಂಬುವುದನ್ನು ಸ್ಪಷ್ಟಪಡಿಸಿದೆ.

ಲೈಂಗಿಕ ಕಿರುಕುಳ, ಅತ್ಯಾಚಾರ, ಕೊಲೆ ಮೊದಲಾದವುಗಳ ಬಗ್ಗೆ ನಾವು ಪತ್ರಿಕೆಗಳಲ್ಲಿ ಓದಿ ತಿಳಿದಿದ್ದೇವೆ. ಆದರೆ ಗಾರ್ಮೆಂಟ್ಸ್‌ಗಳಲ್ಲಿ ಮಹಿಳೆಯರ ಮೇಲಾಗುವ ದೌರ್ಜನ್ಯದ ಬಗ್ಗೆ, ಅಲ್ಲಿಯ ಸಮಸ್ಯೆಗಳ ಬಗ್ಗೆ ಹಾಗೂ ಅಲ್ಲಿ ಕೆಲಸ ಮಾಡುವ ಮಹಿಳೆಯರ ಮಕ್ಕಳಿಗೆ ಯಾವ ರೀತಿಯ ಸೌಲಭ್ಯಗಳು ದೊರಕಬೇಕು, ಸಂಬಳ ಮತ್ತು ಬೋನಸ್ ವಿಚಾರಗಳು, ಬ್ರಾಂಡ್ ಬಟ್ಟೆ ಶೋ ರೂಂಗಳಲ್ಲಿನ ಸಂಬಳದ ವ್ಯವಸ್ಥೆ, ದಿನವೆಲ್ಲ ದುಡಿದರೂ ಟೀ ಬ್ರೇಕ್ ಎಂಬುವುದಿಲ್ಲ, ರಜಾ ದಿನಗಳ ವ್ಯವಸ್ಥೆ ಸರಿಯಿಲ್ಲ, ಹೀಗೆ ಹಲವಾರು ಸಮಸ್ಯೆಗಳ ಬಗ್ಗೆ ವಿವರವಾಗಿ ತಿಳಿಸುವ ಪ್ರಯತ್ನವಾಗಿದೆ.

ಜಾತಿ ವ್ಯವಸ್ಥೆ, ಹೊನ್ನಮ್ಮನವರ ಕೊಲೆ, ಭ್ರಷ್ಟಾಚಾರದ ವಿಷಯದಲ್ಲಿ ಹೋರಾಡಿದ ಮಹಿಳೆ ಭಾಗ್ಯಮ್ಮನವರ ಬೆತ್ತಲೆ ಮೆರವಣಿಗೆ ವಿಷಯವನ್ನು ಎಷ್ಟು ಪತ್ರಿಕೆಗಳಲ್ಲಿ ವಿಚಾರ ಮಾಡಿ ಅವರಿಗೆ ಶಿಕ್ಷೆಯನ್ನು ವಿಧಿಸಿದೆ. ಆದರೆ ಈ ಪತ್ರಿಕೆ ಇದನ್ನೆಲ್ಲ ವಿರೋಧಿಸಿ ಬರೆಯಲು ಪ್ರಯತ್ನಿಸಿದೆ. ಆದರೆ ಇದು ಎಷ್ಟು ಜನಕ್ಕೆ ತಲುಪುತ್ತಿದೆ ಎಂಬುದು ಮುಖ್ಯವಾದ ಸಂಗತಿ. ಈ ಪತ್ರಿಕೆ ಎಲೆ ಮರೆಯ ಕಾಯಾಗದೆ, ಧೈರ್ಯ, ಸಾಹಸದ ವಿಷಯದಲ್ಲಿ ಮಹಿಳೆಯರು ಸಬಲೆಯರು ಗಂಡಿಗಿಂತ ಅವಳು ನಾಲ್ಕು ಪಟ್ಟು ಶಕ್ತಿ ಇರುವವಳು ಎಂಬುವಂತಹ ವಿಷಯವನ್ನು ಈ ಪತ್ರಿಕೆಯಲ್ಲಿ ಇನ್ನೂ ಹೆಚ್ಚಾಗಿ ಪ್ರಕಟಿಸಿ. ನಿಮ್ಮ ಈ ಪತ್ರಿಕೆ ಬಹಳ ಜನರಿಗೆ ಮುಟ್ಟುವಂತಾಗಲಿ, ಸರಕಾರದ ಕಿವುಡು ಜನಕ್ಕೆ "ಮಾನಸ ಪತ್ರಿಕೆ" ಕಣ್ಣಿನ ಮತ್ತು ಕಿವುಡಿನ ಔಷಧಿ (ಮದ್ದಾಗಲೆಂದು) ಯಾಗಲೆಂದು ಹಾರೈಸುವ.

*– **ಸೌಮ್ಯ ವೈ.**, ಎನ್.ಎಂ.ಕೆ.ಆರ್.ವಿ ಕಾಲೇಜು*



'ನಮ್ಮ ಮಾನಸ' ನಿಮ್ಮ ಕೈಗಿತ್ತಿರುವೆವು! ಮುಂದೆ ಸಾಗುವಾಗ ಒಮ್ಮೆ ಹಿಂದೆ ನೋಡಿರಿ. ಶುಭ ಹಾರೈಕೆಗಳು.

*ಪ್ರೀತಿಯಿಂದ*

***ಸವಿತಾ ನಾಗಭೂಷಣ***



*Dear old team of Namma manasa.*

*If you felt you needed rest after a long haul, you deserve the rest. You have done a good job all these years. More than anything a young team has come forward to take up running of the Magazine. I congratulate you on that. Guide them for some time . We too will cooperate.*

*Dear New team,*

*Welcome to you all. The old team faced different problems than yours. You are technically superior. Some of the old problems have been ironed out,but some new problems have risen. Earlier violence was subtle. Now it is brazen. Look for solutions. I am sure you will find it.Hope to read good articles by the younger generation in the Namma manasa.*

*All the best.*

***Ahalya from Mysore.***

# ಕೃಷಿ ಆಧಾರಿತ ಸಮಾಜ ದೇಶದ ಮಾದರಿ ರಾಜ್ಯ ಕರ್ನಾಟಕ ಮುನ್ನಡೆಯುತ್ತಿದೆ

ರಾಜ್ಯದ ಆರ್ಥಿಕ ಬೆಳವಣಿಗೆಯಲ್ಲಿ ಕೃಷಿ ಕ್ಷೇತ್ರದ ಪಾತ್ರ ಪ್ರಮುಖ. ಕೃಷಿ ವಲಯದ ಉತ್ತೇಜನಕ್ಕೆ ಸರ್ಕಾರ ಹಲವು ಯೋಜನೆಗಳನ್ನು ಜಾರಿಗೆ ತಂದಿದೆ. ರೈತರ ಜೀವನ ಮಟ್ಟ ಸುಧಾರಿಸಲು ಬದ್ಧವಾಗಿರುವ ಸರ್ಕಾರ ಶೇ.1ರ ಅತ್ಯಲ್ಪ ಬಡ್ಡಿ ದರದಲ್ಲಿ ಕೃಷಿ ಸಾಲ ಸೌಲಭ್ಯಗಳನ್ನು ಜಾರಿಗೊಳಿಸಿದೆ. ಹಾಗೆಯೇ, ರೈತರ ಅಭ್ಯುದಯಕ್ಕಾಗಿ ಪ್ರತ್ಯೇಕ ಕೃಷಿ ಬಜೆಟ್ ಮಂಡಿಸಿದೆ. ಈ ಎರಡು ಕ್ರಮಗಳನ್ನು ಕೈಗೊಂಡ ದೇಶದ ಮೊದಲ ಸರ್ಕಾರವೆನಿಸಿದೆ. ಶೇ. 3ರ ಬಡ್ಡಿ ದರದಲ್ಲಿ ನೇಕಾರರು ಮತ್ತು ಮೀನುಗಾರರಿಗೆ ಸಹಕಾರ ಸಂಘಗಳಿಂದ ಅಲ್ಪಾವಧಿ ಸಾಲ ಸೌಲಭ್ಯವನ್ನು ಸರ್ಕಾರ ಮುಂದುವರೆಸಿದೆ.

**"ಉಳುಮೆ ಗೆಲುಮೆ"**

- 'ಸಾವಯುವ ಕೃಷಿ' ಜನಪ್ರಿಯತೆಗಾಗಿ 'ಮುಖ್ಯಮಂತ್ರಿಗಳ ನಡಿಗೆ ತಿಂಗಳಿಗೊಮ್ಮೆ ಹಳ್ಳಿ ಕಡೆಗೆ' ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. ಇದರಡಿ ಮುಖ್ಯಮಂತ್ರಿಗಳು ವಿವಿಧ ಜಿಲ್ಲೆಗಳ ಸಾವಯವ ಕೃಷಿಕರೊಂದಿಗೆ ಸಂವಾದ, ವಾಸ್ತವ್ಯ ಹಾಗೂ ಒಡನಾಟದ ಕಾರ್ಯಕ್ರಮ ಹಮ್ಮಿಕೊಂಡಿದ್ದಾರೆ. ಇದು ಅತ್ಯಂತ ಜನಪ್ರಿಯವಾಗಿದೆ. ಹಾಗೆಯೇ ಸರ್ಕಾರ ಕೃಷಿ ಉದ್ಯಮ ಅಭಿವೃದ್ಧಿ ನೀತಿಯನ್ನು ರೂಪಿಸಿದೆ. 2011ರಲ್ಲಿ ಜಾಗತಿಕ ಕೃಷಿ ವ್ಯಾಪಾರ ಬಂಡವಾಳ ಹೂಡಿಕೆದಾರರ ಸಮಾವೇಶ ಆಯೋಜಿಸಲು ಉದ್ದೇಶಿಸಿದೆ.
- ದೇಶದಲ್ಲೇ ಮೊದಲ ಬಾರಿಗೆ 17,800 ಕೋಟಿ ರೂ. ಗಾತ್ರದ ಪ್ರತ್ಯೇಕ ಬಜೆಟ್ ಮಂಡನೆ.
- 1,000 ಕೋಟಿ ರೂ. ವೆಚ್ಚದಲ್ಲಿ 10 ಲಕ್ಷ ಸಣ್ಣ ಹಾಗೂ ಅತೀ ಸಣ್ಣ ರೈತರಿಗೆ ತಲಾ 10,000 ರೂ. ಪ್ರೋತ್ಸಾಹ ಧನ ನೀಡುವ 'ಸುವರ್ಣ ಭೂಮಿ' ಯೋಜನೆ ಜಾರಿ.
- 108 ಕೋಟಿ ರೂ. ವೆಚ್ಚದಲ್ಲಿ 84 ಸಾವಿರ ಫಲಾನುಭವಿಗಳಿಗೆ ಶೇ. 50 ರಿಯಾಯತಿ ದರದಲ್ಲಿ ಪವರ್ ಟ್ರಿಲ್ಲರ್ ಡೀಸೆಲ್ ಪಂಪ್ಸೆಟ್, ಕೃಷಿ ಸಲಕರಣೆ ನೀಡಿಕೆ.
- ಬೆಳೆ ವಿಮೆ ಯೋಜನೆಯಡಿ 83.59 ಕೋಟಿ ರೂ. ವೆಚ್ಚ.
- ಸುವರ್ಣ ಕೃಷಿ ಹೊಂಡ ಯೋಜನೆಯಡಿ 30 ಕೋಟಿ ರೂ. ವೆಚ್ಚದಲ್ಲಿ 30,735 ಕೃಷಿ ಹೊಂಡ ನಿರ್ಮಾಣ.
- "ಭೂ ಚೇತನ" ಯೋಜನೆಯಡಿ ಖುಷ್ಕಿ ಬೇಸಾಯದಲ್ಲಿ ವೈಜ್ಞಾನಿಕ ಪದ್ಧತಿ ಅಳವಡಿಕೆ. 16 ಜಿಲ್ಲೆಗಳ 90 ತಾಲ್ಲೂಕುಗಳಲ್ಲಿನ ಸರಿಸುಮಾರು 12 ಲಕ್ಷ ಹೆಕ್ಟೇರ್ ಜಮೀನು ಸೇರ್ಪಡೆ. ವಿವಿಧ ಬೆಳೆಗಳಲ್ಲಿ ಶೇ.25 ರಿಂದ 60ರಷ್ಟು ಇಳುವಳಿ ಹೆಚ್ಚಳ. 2011-12ರಲ್ಲಿ 30 ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ವಿಸ್ತರಣೆ.
- ಸಾವಯುವ ಕೃಷಿ ಮಿಷನ್ ಸ್ಥಾಪನೆ. 83 ಸಾವಿರ ರೈತ ಸದಸ್ಯರ ಸೇರ್ಪಡೆ. 10.50 ಕೋಟಿ ರೂ.ವೆಚ್ಚ. 76 ಸಾವಿರ ಹೆಕ್ಟೇರ್‌ನಲ್ಲಿ ಅಳವಡಿಕೆ. ರಸಗೊಬ್ಬರ ಅಳವಡಿಕೆ ಕಡಿಮೆ.
- ಅಂತರ್ಜಲ ಸಂರಕ್ಷಣೆ ಹಾಗೂ ನೀರಿನ ಮಿತವ್ಯಯಕ್ಕಾಗಿ ಹನಿ ನೀರಾವರಿ ಅಳವಡಿಕೆ ಕಡ್ಡಾಯ. ರೈತರಿಗೆ ಸಹಾಯ ಧನ ಮತ್ತು ತಾಂತ್ರಿಕತೆ ನೀಡಿಕೆಗೆ ಅಂತರ್ ಗಂಗಾ ಸೂಕ್ಷ್ಮ ನೀರಾವರಿ ನಿಗಮ ಸ್ಥಾಪನೆ.
- ಕೃಷಿ ಮೇಳಗಳ ಆಯೋಜನೆಗಾಗಿ 14 ಕೋಟಿ ರೂ. ವೆಚ್ಚ. 245 ಕೃಷಿ ಮೇಳ ಆಯೋಜನೆ.
- ಹತ್ತು ಅಶ್ವಶಕ್ತಿಯ ನೀರಾವರಿ ಪಂಪ್‌ಸೆಟ್ ಹೊಂದಿರುವ 18 ಲಕ್ಷಕ್ಕೂ ಹೆಚ್ಚಿನ ರೈತರಿಗೆ ಉಚಿತ ವಿದ್ಯುತ್ ಪೂರೈಕೆ. 2,300 ಕೋಟಿ ರೂ. ವೆಚ್ಚ.

**ಕೃಷಿ ಅಭಿವೃದ್ಧಿ, ನಾಡ ಸಮೃದ್ಧಿ ಅಭಿವೃದ್ಧಿಯೇ ಆಡಳಿತ ಮಂತ್ರ**


ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD.No.: MAG(3) NPP/399(A)/2006-07 **Reg.KA/BGS/2074/2010-12**

# ರೊಟ್ಟಿ ಮತ್ತು ಪ್ರತಿಭಟನೆ



ದ್ಯಾವಕ್ಕನ ಒಲೆಯಲ್ಲಿ ನಿಗಿನಿಗಿ ಕೆಂಡ
ಹಿಟ್ಟಿನ ಮಡಕೆಯ ಮುಗುಳ್ನಗು
ದ್ಯಾವಕ್ಕನ ತಲೆತುಂಬ ಕನವರಿಕೆ
ರೊಟ್ಟಿ ತಟ್ಟುವ ಕೈಚಳಕ
ರೊಟ್ಟಿಗೆ ಕಾವಲಿಯ ಆಶ್ರಯ
ಹೊರಗೆ ದನಗಳ ಮೇಳ

ಚುಪುರುಗಡ್ಡ ನೇತಾಡುವ ಚೀಲ
ಕೊಡೆಗಳ ಸಾಲು ಸಾಲು
ಕೈಯಲ್ಲಿ ಕೋಲು ಅಕ್ಷರಗಳ ಮೆರವಣಿಗೆ
ಹಸಿರು ಶಾಲು ದೊಡ್ಡಗುಂಪು
ಜೈಕಾರ ಧಿಕ್ಕಾರಗಳ ಮೆರೆತ
ಬಡಾವಣೆಯ ತುಂಬೆಲ್ಲ ಧೀಂಕಿಟ

ದ್ಯಾವಕ್ಕ ಕಕ್ಕಾಬಿಕ್ಕಿ
ತಿಮ್ಮಕ್ಕನ ಮಗನ ಪೊಲೀಸರು ಎಳೆದೊಯ್ದಾಗ
ಬೀರಪ್ಪ ಲಾಟಿ ಏಟಿಂದ ಸತ್ತಾಗ
ಕಸದ ತೊಟ್ಟಿಯಲೊಂದು ಹಸುಗೂಸು ಅತ್ತಾಗ
ಜಮಾಯಿಸಿದ್ದರು ಸಾಕಷ್ಟು ಮಂದಿ
ಈ ಜನರ ಮುಖ ನೋಡಿದ ನೆನಪಿಲ್ಲ

ದ್ಯಾವಕ್ಕನ ರೊಟ್ಟಿ ಸೀದು ಕರಕಲು
ಜೈಕಾರಗಳ ಮಂದಿಯ ಮೂಗಿಗೆ ಬಡಿಯಲಿಲ್ಲ
ದ್ಯಾವಕ್ಕನ ರೊಟ್ಟಿ ಸೀದ ವಾಸನೆ
ಆಕೆಯ ಒಲೆ ಹೊದ್ದು ಮಲಗಿದೆ
ಹಿಟ್ಟಿನ ಮಡಕೆ ಮುಲುಗುಟ್ಟುತ್ತಿದೆ
ದ್ಯಾವಕ್ಕ ಮೆರವಣಿಗೆಗಾಗಿ ಕಾಯುತ್ತಲೇ ಇದ್ದಾಳೆ

■ *ಡಾ. ಚಂದ್ರಮತಿ ಸೋಂದಾ*

*ಚಿತ್ರ : ಶರತ್ ರಾಮ್*

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
**ನಮ್ಮ ಮಾನಸ**
114/5, 9ನೇ ಕ್ರಾಸ್, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018